## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

1077 ಶ್ರೀ ಹೆಚ್. ದಾಸಪ್ಪ, ವಿಲ್‌ಸನ್ ಗಾರ್ಡನ್, ಬೆಂಗಳೂರು-27.

1078 ಶ್ರೀ ಎನ್. ರಾಮಯ್ಯ C/o ಜಿ. ಎಸ್. ಶಿವಣ್ಣ, ಎಲಚೇನಹಳ್ಳಿ, ಬೆಂಗಳೂರು ಸೌತ್.

1079 ಶ್ರೀ ಕೆ. ಜಿ. ಪರಮೇಶ್ವರಯ್ಯ, ಕಗ್ಗಲಿಪುರ, ಬೆಂಗಳೂರು ಸೌತ್.

1080 ಶ್ರೀ ಡಾ|| ಹೆಚ್. ಸಿದ್ದಲಿಂಗಯ್ಯ, ಯು.ಎಸ್.ಎ.

1081 ಶ್ರೀ ಟಿ. ಕೆ. ಸಿದ್ಧಲಿಂಗಪ್ಪ, ದಾವಣಗೆರೆ.

1082 ಶ್ರೀಮತಿ ಎಂ. ಎ. ನೀಲಾಂಬಿಕ, ಕಿಲ್ಲೆಮೊಹಲ್ಲ, ಮೈಸೂರು-4

1083 ಶ್ರೀ ಜಿ. ವೀರಭದ್ರಯ್ಯ, ಗುಡ್ಡದಹಳ್ಳಿ, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.

1084 ಶ್ರೀ ಅನ್ನಪೂರ್ಣಮ್ಮ W/o ಶ್ರೀ ಸದಾಶಿವಯ್ಯ, ಮೊಸಲೆ, ಹಾಸನ ಜಿಲ್ಲೆ.

1085 ಶ್ರೀ ಕೆ. ಎಸ್. ಶಿವಲಿಂಗಯ್ಯ, ನ್ಯೂಔರಂಗಾಬಾದ್, ಮಹಾರಾಷ್ಟ್ರ.

1086 ಶ್ರೀ ಸಿ. ಸಿದ್ಧಪ್ಪ, ಸೂಪರ್‌ವೈಸರ್, ಕಾಟನ್‌ಮಿಲ್ಸ್, ದಾವಣಗೆರೆ.

1087 ಶ್ರೀ ಎಂ. ಬಿ. ರಾಜಶೇಖರಯ್ಯ S/o ಶ್ರೀ ಬೈರಪ್ಪ, ಮಾದೇನಹಳ್ಳಿ, ನೆಲಮಂಗಲ ತಾ|| ಬೆಂಗಳೂರು ಜಿಲ್ಲೆ.

1088 ಶ್ರೀ ಕೆ. ಸಿ. ಶಿವರುದ್ರಪ್ಪ, ಪ್ರೊ|| ಕಪಾಲಿ ಟ್ರೇಡಿಂಗ್ ಕಂಪನಿ, ರಾಜಾಜಿನಗರ. ಬೆಂಗಳೂರು-10

1089 ಶ್ರೀ ಎಸ್. ಚನ್ನಯ್ಯ, ರಾಜಾಜಿನಗರ, ಬೆಂಗಳೂರು-10

1090 ಶ್ರೀ ಆರ್. ಶ್ರೀಕಂಠಯ್ಯ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು-79

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೧೧ ನವೆಂಬರ್, ೧೯೮೫

## ಶ್ರೀ ಸಿದ್ಧಗಂಗಾ ಗುರುಕರಣ ತ್ರಿವಿಧ

ಅರವಿಂದ ರಮಣರ ಸ್ವಾಮಿ ವಿವೇಕರ
ಗುರು ಪರಮಹಂಸರ ಶ್ರೇಣಿಯೊಳು। ಬೆಳಗಿದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ||

* * *

ದೀನರ ದೀಪಕ ಬಡವರಿಗೆ ನೀ ಬಂಧು
ಕೊಡುಗೈಯ ಜಂಗಮ ನನ್ನ ತಂದೆ/ಶರಣೇಶ
ಸಿದ್ಧಗಂಗಾ ಗುರುವೆ ಕೃಪೆಯಾಗು ||

* * *

ನೀನೆ ಮಹಾಕಾವ್ಯ ಸಕಲವೇದಗಳಾದೆ
ನೀನೆ ಆಗಿರುವೆ ಉಪನಿಷದ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ||

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ







# ಶ್ರೀವಾಣಿ

ಆತ್ಮಗೌರವ ಜೀವನದ ಒಂದು ಮಹಾತತ್ತ್ವ. ಬದುಕಿನಲ್ಲಿ ಏನೆಲ್ಲಾ ಸುಲಭವಾಗಿ ಸಂಪಾದನೆ ಮಾಡಬಹುದು. ಸುಲಭವಾಗಿ ಕಳೆಯಲೂಬಹುದು. ಆತ್ಮಗೌರವ ಸುಲಭಸಾಧ್ಯವಿಲ್ಲ ಅಂದರೆ ತನ್ನ ತನದ ಸಂಪಾದನೆ. ಸಂಪಾದನೆ ಎಂದಕೂಡಲೆ ದೇಹ ದಂಡನೆ ಅತ್ಯಾವಶ್ಯಕ, ವ್ಯವಸ್ಥಿತ ಕಾರ್ಯಯೋಜನೆ ಅತಿಮುಖ್ಯ ಕಾರ್ಯ ಸಾಧನೆಯಲ್ಲಿ ದೃಢಸಂಕಲ್ಪ. ಧೈರ್ಯ ಸ್ಥೈರ್ಯಗಳು ಬೇಕು. ಇಷ್ಟಾದರೂ ಸಾಲದು. ಗುರು ಕೃಪೆ, ದೈವಾನುಗ್ರಹವಿರಬೇಕು. ಹಿತಕರ ವಾತಾವರಣ ಕೂಡಿಬರಬೇಕು. ಇಷ್ಟೆಲ್ಲಾ ಕೂಡಿ ಬಂದರೂ "ಶ್ರೇಯಾಂಸಿ ಬಹುವಿಘ್ನಾನಿ' ಎಂಬಂತೆ ವಿಘ್ನ ಪರಂಪರೆ ಅಡ್ಡನಿಲ್ಲುತ್ತವೆ. ಆಶೆ, ಆಮಿಷ ರೋಷ ವಿಷಯಾದಿಗಳೆಲ್ಲಾ ತಮ್ಮ ಶಕ್ತಿಪ್ರದರ್ಶನ ಮಾಡಲು ಹವಣಿಸುತ್ತಿರುತ್ತವೆ. ಇಲ್ಲಿ ವ್ಯಕ್ತಿಯ ನಿಜವಾದ ಅಂತಸತ್ವ ಹೊರಬೀಳುತ್ತದೆ. ತನ್ನತನ ಪ್ರಕಟವಾಗುತ್ತದೆ. ಸಹನೆ, ತಾಳ್ಮೆ, ಜಾಗೃತಿಗಳು ಕ್ರಿಯಾಶೀಲವಾಗಬೇಕು. ಹೊಡೆತ ಬಡಿತಗಳು ಸಂಸ್ಕಾರದ ಪೆಟ್ಟುಗಳೆಂದು ಭಾವಿಸಬೇಕು. ಆದಾಗ ಬದುಕಿನಲ್ಲಿ ಜಯಲಭ್ಯವಾಗುತ್ತದೆ. ಬದುಕಿಗೊಂದು ಬೆಲೆ ದೊರೆಯುತ್ತದೆ. ಒಂದು ಮಹಾ ತತ್ತ್ವದ ಸಂಪಾದನೆ ಎಷ್ಟು ಕಷ್ಟವೋ ರಕ್ಷಣೆ ಅತ್ಯಂತ ಕಷ್ಟ. ನಿರಂತರ ಜಾಗರಿದ್ದು ಕಾಯಬೇಕು. ತತ್ವ ಬೆಲೆ ಅರಿತ ವ್ಯಕ್ತಿ ನಿಜಕ್ಕೂ ಜಾಗರಿರುತ್ತಾನೆ. ಪ್ರಾಣತೆತ್ತಾದರೂ ರಕ್ಷಣೆ ಮಾಡುತ್ತಾನೆ. ಬೆಲೆ ತಿಳಿಯದ ವ್ಯಕ್ತಿ ಕುಸಿದು ಬೀಳುತ್ತಾನೆ. ಆತ್ಮ ವಿಶ್ವಾಸ ಕಳೆದು ಕೊಳ್ಳುತ್ತಾನೆ. ಆತನಿಗೆ ಆತ್ಮ ಗೌರವ ಕನಸಿನ ಗಂಟು. ಆತ್ಮನಾಶ ಖಂಡಿತ. ಅವನ ಬದುಕು ನಿರರ್ಥಕ. ಸಮಾಜದಲ್ಲಿ ಆತ ಜೀವಂತ ಶವ. ಗಳಿಕೆ ಉಳಿಕೆ ನಿಜಕ್ಕೂ ಅರ್ಥವತ್ತಾದ ಮಾತು. ಆದ್ದರಿಂದ ಆತ್ಮಗೌರವ ಆತ್ಮೋನ್ನತಿಗೆ ಸಾಧಕ. ಈ ಮಹಾ ತತ್ವದ ಗಳಿಕೆ ಜೀವಿತದ ಧ್ಯೇಯವಾಗಬೇಕು.

"ಸಿದ್ಧಗಂಗಾ" ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *
ಸಹ ಸಂಪಾದಕರು
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *
ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *
ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *
ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *
ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *
ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ



**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಜೊತೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

"ನಮ್ಮ ದೇಶದ ಅತಿ ಬಡವನ ಚಿತ್ರ ನಿಮ್ಮ ಕಣ್ಣು ಮುಂದಿರಲಿ. ನಾವು ಮಾಡಬೇಕಾದದ್ದು ಅವನ ಸೇವೆ. ತಿನ್ನುವುದು ಅವನಿತ್ತ ಉಪ್ಪು. ಅವನ ಕಣ್ಣಂಚಿನ ನೀರನ್ನು ಅಳಿಸುವ ಕರ್ತವ್ಯದ ಭಾವನೆ ಸದಾ ನಿಮ್ಮಲ್ಲಿ ಜಾಗೃತವಾಗಿರಲಿ" ಹೀಗೆಂದವರು ರಾಜ್ಯದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆಯವರು. ಸಂದರ್ಭ ಸರಕಾರಿ ನೌಕರರು ಮತ್ತು ಶಿಕ್ಷಕರ ಒಕ್ಕೂಟದ ಸಮ್ಮೇಳನ ದಿನಾಂಕ 17-10-85. ಹೃದಯವಂತಿಕೆಯ ಮಾತು. ಹೃದಯವಿದ್ದವರು ಆಡುವ ಮಾತು. ರಾಜ್ಯದ ಪ್ರಥಮ ಪ್ರಜೆಗೆ ತಕ್ಕುದಾದ ನುಡಿ. ಅಧಿಕಾರಿಗಳ ಮನೋಧರ್ಮ ಪರಿವರ್ತಿತವಾಗಬೇಕು. ನಾಡಿನ ಬೆನ್ನೆಲಬು. ಶ್ರೀ ಸಾಮಾನ್ಯ. ಅವನ ಸುಖ ನಾಡಿನ ಸುಖ, ಅವನ ದುಃಖ ನಾಡಿನ ದುಃಖ. ಅವನಿಲ್ಲದೆ ಸರಕಾರವಿಲ್ಲ, ಸಂಪುಟವಿಲ್ಲ; ಸಿಬ್ಬಂದಿಯಿಲ್ಲ. ಅವನಿಗೆ ಇಂದು ಆಗುತ್ತಿರುವ ಶೋಷಣೆ ನಿಲ್ಲಬೇಕು. ಕಛೇರಿಗೆ, ಕಾರ್ಯಾಲಯಕ್ಕೆ ಅವನು ಬಂದಾಗ ಗೌರವದಿಂದ, ಸೌಜನ್ಯದಿಂದ ಕಾಣುವ ಪ್ರವೃತ್ತಿ ಅಧಿಕಾರಿಗಳಿಗೆ, ಸಿಬ್ಬಂದಿ ವರ್ಗದವರಿಗೆ ಮರ್ಯಾದೆ ತರುತ್ತದೆ. ಅನುಕಂಪ, ಸಹಾನುಭೂತಿ ಅವನಿಗೆ ಬೇಡ. ಅವನಿಗೆ ತೋರಿಸಬೇಕಾದ ಕರ್ತವ್ಯ ಅದು ನೆನಪಿರಬೇಕು ಸರಕಾರದ ಕಾರ್ಯಾಂಗಕ್ಕೆ ಅದು. ಅವನ ತಾಳ್ಮೆಗೂ ಮಿತಿಯಿದೆ ಅದು ಸ್ಫೋಟವಾದರೆ ಅಪಾಯಕಾರಿ; ಅನರ್ಥ ಪರಂಪರೆ, ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ ಧರೆಹತ್ತಿ ಉರಿದರೆ ನಿಲಬಹುದೆ? ಪಹಣಿ ಬರೆದು ಕೊಡಲು, ಆದಾಯ ತೆರಿಗೆ ದೃಢೀಕರಣ ಪತ್ರ ಕೊಡಲು, ಹತ್ತಾರು ಬಾರಿ ಸುತ್ತುವ ನೋವು ಪ್ರಜೆಗೆ ತಪ್ಪಬೇಕು. ಕರುಳಿನ ಕೂಗು ಕಿವಿಗೆ ಕೇಳಿಸಬೇಕು.

ಲಂಚವಿಲ್ಲದೆ ಬಂದು ಪತ್ರವೂ ಇಂದು ಒಂದು ಮೇಜಿನಿಂದ ಇನ್ನೊಂದು ಮೇಜಿಗೆ ಸಾಗುವುದಿಲ್ಲ. ವ್ಯವಸ್ಥಿತ ಪದ್ಧತಿ ಲಂಚ ಪಡೆಯಲು, ಲಂಚ ತಿಂದರೂ ಕೆಲಸವಾಗುವುದು. ಮರಳಲ್ಲಿ ಎಣ್ಣೆ ತೆಗೆವ ಸಾಹಸ. ಇದಕ್ಕೆ ಕೊನೆ ಎಂದು? ಕೊನೆ ಎಲ್ಲಿ? ಕೊನೆ ಯಾರಿಂದ? ತಮ್ಮ ಅಧಿಕಾರಿ ಅಣ್ಣ ರೈತ. ಅಣ್ಣನ ಕೆಲಸವಾಗಲೂ ಅಧಿಕಾರಿ ತಮ್ಮ ಲಂಚವಿಲ್ಲದೆ ಕೆಲಸ ಮಾಡಲಾರದಷ್ಟು ಕೋದ್ರಗ್ರಸ್ಥವಾಗಿದೆ. ಇಂದು ಇಲಾಖೆಗಳು. ಇದನ್ನು ಕಂಡೇ ಮುಖ್ಯಮಂತ್ರಿಗಳು ನೊಂದು ನುಡಿಯುವಂತಾದದ್ದು ಅಧಿಕಾರಿಗಳಿಗೆ, ಸಿಬ್ಬಂದಿ ವರ್ಗದವರಿಗೆ, ಇದು ಭೂಷಣವಲ್ಲ.

ಅಂತಃಕರಣ ಸಾಕ್ಷಿಯೊಂದು ಇದೆಯಾದರೆ ಇನ್ನಾದರೂ ನೇರಮಾರ್ಗದಲ್ಲಿ ನಡೆಯಲಿ ( ಇದಕ್ಕೆ ಅಪವಾದಗಳಿವೆಯಾದರೂ ಅವುಗಳ ಸಂಖ್ಯೆ ತುಂಬಾ ಕಡಿಮೆ ) ಶಿಕ್ಷಕರು ಉಪಕಸಬು ಎಂಬಂತೆ ಭೋಧನ ವೃತ್ತಿಯನ್ನು ಪರಿಗಣಿಸದೆ ಅದಕ್ಕೇ ನಿಷ್ಠರಾಗಲಿ. ರಾಷ್ಟ್ರದ ತರುಣ ಜನಾಂಗವನ್ನು ಸತ್ಪಥದಲ್ಲಿ (ನಿಷ್ಠಾವಂತ, ಆದರ್ಶ ಶಿಕ್ಷಕರಿದ್ದಾರೆ ಕೆಲವರು ಅವರು ಹೆಚ್ಚಾಗಬೇಕು) ನಡೆಸುವಂಥ ಪ್ರಭಾವ, ಸ್ಫೂರ್ತಿಗಳನ್ನು ಅವರ ಮೇಲೆ ರಾಜಕಾರಣಿಗಳು ಅನಾವಶ್ಯವಾಗಿ ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶ ಮಾಡದಿರಲಿ ತರುಣ ಜನಾಂಗ ತಮ್ಮ ಒಳಿತು ಕೆಡುಕು ರಾಷ್ಟ್ರಜೀವನದಿಂದ ದೂರಸರಿದದ್ದಲ್ಲ ಎಂದು ತಿಳಿದು ನಡೆಯುವಂತಾಗಲಿ. ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಿರುವ ಈ ಶುಭ ಸಂದರ್ಭದಲ್ಲಿ ಕನ್ನಡಿಗರ ಏಳಿಗೆ ರಾಷ್ಟ್ರದ ಏಳಿಗೆ ಎಂಬ ಸದ್ಭಾವ, ಸ್ವಚಿಂತನೆ ಮೂಡಿಬರಲಿ ಎಂದೇ "ಸಿದ್ಧಗಂಗಾ" ಹಾರೈಸುತ್ತದೆ.

ಸಿದ್ಧಗಂಗೆಯಲ್ಲಿ ದಿನಾಂಕ 24-10-85 ರಿಂದ 30-10-85ರವರೆಗೆ ಚಿತ್ರದುರ್ಗ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ ಇಲಕಲ್ಲ ಅವರ ಶರಣ ಸಿದ್ಧಾಂತ ವಿದ್ಯಾಪೀಠದ ಎಂಟನೆಯ ಶಿವಾನುಭವ ತರಬೇತಿ ಶಿಬಿರ ನಡೆಯಿತು ಒಂದು ವಾರ ಪರ್ಯಂತ ಶರಣ ಧರ್ಮದ ಚಿಂತನ-ಮಂಥನ. ಗುರು-ಲಿಂಗ.ಜಂಗಮ, ಮಠ-ಮಾನ್ಯಗಳ ಸಮಾಜದ ಪ್ರಗತಿಯ ಬಗ್ಗೆ ಚರ್ಚೆಯಾಯಿತು. ಬಸವಣ್ಣನವರ ಜಯಂತಿಯೂ ನಡೆಯಿತು. "ಕಾವಿಯ ಕಿಮ್ಮತ್ತು ಉಳಿಸಿದವರು ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳು" ಎಂದು ಇಲಕಲ್ಲ ಸ್ವಾಮಿಗಳು ಮೆಚ್ಚುಗೆ ಮಾಡಿದರು. "ಸಿದ್ಧಗಂಗೆಗೆ ಬರುವ ಗುರು, ಜಂಗಮ, ಭಕ್ತ ಎಲ್ಲರೂ ತಲೆಬಾಗಿಯೇ ಬರಬೇಕು. ಅಂಥ ಅದ್ಭುತ ಇಲ್ಲಿ ನಡೆದಿದೆ." ಎಂದವರು ಬಾಗಿಲುಕೋಟೆಯ ಪ್ರಭುದೇವರು ಚರಂತಿ ಮಠ. ಶರಣ ಸಿದ್ಧಾಂತ, ಅರ್ಥವಾಗಬೇಕಾದರೆ ಅನ್ಯ ಸಿದ್ಧಾಂತಗಳ ಪರಿಚಯ ಅಗತ್ಯ– ಇಲಕಲ್ಲಿನ ಪೂಜ್ಯ ಶ್ರೀ ಶ್ರೀಗಳು ಕೈಗೊಂಡಿರುವ ಮಹಾಮಣಿಹ ಅದನ್ನು ಗಮನಿಸಬೇಕು" ಎಂದು ಸಿದ್ಧಗಂಗಾ ಶ್ರೀ ಶ್ರೀಗಳವರು ನುಡಿದರು.

ಸಿದ್ಧಗಂಗೆಯಲ್ಲಿ ಶಿವಾನುಭವ– 'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ" ಎಂಬ ನುಡಿಗೆ ಭಾಷ್ಯವಾಯಿತು ಶಿವಾನುಭವಿಗಳ, ಸ್ವಾಮಿಗಳ. ಶಿಬಿರಾರ್ಥಿಗಳ, ಬೋಧಕರ, ಭಕ್ತರ ಸಮ್ಮೇಳನದಿಂದ ಬಸವಕಲ್ಯಾಣ ಮತ್ತೆ ಹುಟ್ಟು ಪಡೆದಂತೆ ಶ್ರೀ ಮಠದಲ್ಲಿ ಕಂಗೊಳಿಸಿತು. ಉತ್ತರದ ಕೃಷ್ಣೆ ದಕ್ಷಿಣದ ಕಾವೇರಿ ಸಂಗಮಿಸಿ ಶರಣಧರ್ಮಧ್ವಜ ಬಾನಗಲ ಹಾರಾಡಿತು. ಬಸವಜ್ಯೋತಿ ಬೆಳಗಿತು. ಶಿಬಿರದ ಯಶಸ್ಸಿಗೆ ಶ್ರಮಿಸಿದವರು ನೂರಾರು ಮಂದಿ, ನೂರಾರು ರೂಪದಲ್ಲಿ ಅವರಿಗೆಲ್ಲ 'ಸಿದ್ಧಗಂಗಾ' ತುಂಬು ಹೃದಯದ ಶರಣು ಶರಣಾರ್ಥಿಗಳನ್ನರ್ಪಿಸುತ್ತದೆ.



# ಮಾಣಿಕ್ಯ ದೀಪ್ತಿ

—ಎಚ್. ಎಸ್. ಸಿದ್ಧಗಂಗಪ್ಪ, ಎಂ. ಎ,
ಸಾಮಾಜಿಕ ಕಾರ್ಯಕರ್ತ, ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ–577201

ಕೀರ್ತಿ ಬೇಡ ಎಂದು ಹೇಳುವವರು ಸಮಾಜದಲ್ಲಿ ತುಂಬಾ ವಿರಳ. ಮೈಬಗ್ಗಿಸಿ, ಬೆವರು ಸುರಿಸಿ ದುಡಿಯದೆ ಧಿಡೀರನೆ ಶ್ರೀಮಂತನಾಗಬೇಕು, ಯಾವುದೇ ಕ್ಷೇತ್ರದಲ್ಲಿಯೇ ಆಗಲಿ ಸಾಧನೆ ಮಾಡದೆ ಹೆಸರು ಗಳಿಸಬೇಕೆನ್ನುವವರ ಒಂದು ಗುಂಪಾದರೆ, ಸದ್ದು ಗದ್ದಲವಿಲ್ಲದೆ, ಬೇರೊಬ್ಬರು ಮೆಚ್ಚಲಿ ಎಂದು ಕೆಲಸಮಾಡದೆ, ಹೆಸರಿಗಾಗಿ ಪರದಾಡದೆ ತಮ್ಮ ಕರ್ತವ್ಯವನ್ನು ನಿವಂಚನೆಯಿಂದ ನಿರ್ವಹಿಸುತ್ತಾ ಎಲೆ ಮರೆಯ ಹೂವಿನಂತೆ ಜೀವನ ನಡೆಸುವವರೂ ಇದ್ದಾರೆ. ಕೆಲವರು ದಿನ ಬೆಳಗಾದರೆ ಪತ್ರಿಕೆಗಳಲ್ಲಿ, ರೇಡಿಯೋ, ಆಹ್ವಾನ ಪತ್ರಿಕೆಗಳಲ್ಲಿ ತಮ್ಮ ಹೆಸರು ಮೇಲಿಂದ ಮೇಲೆ ಬರಬೇಕು. ಎಲ್ಲರ ಬಾಯಿಯಲ್ಲಿಯೂ ತಮ್ಮ ಹೆಸರು ರಾರಾಜಿಸಬೇಕು ಎಂಬುವವರಿಗೆ ನಮ್ಮಲ್ಲಿ ಕೊರತೆಯಿಲ್ಲ. ಡಿ. ವಿ ಜಿ. ಅವರು ಹೆಸರಿನ ಹಂಬಲ ಪಡುವವವರನ್ನು ಕುರಿತು ಒಂದು ಕಡೆ

ಹೆಸರು ಹೆಸರೆಂದು ನೀಂ ಬಸವಳಿವುದೇಕಯ್ಯ
ಕಸದೊಳಗೆ ಕಸವಾಗಿ ಹೋಹನಲೆ ನೀನು
ಮುಸುಕಲೀ ಧರೆಯ ಮರವೆನ್ನನಬೇಡು ವನ್ನುವ
ಮಿಸುಕದಿರು ಮಣ್ಣಿನಲಿ ಮಂಕುತಿಮ್ಮ

ಎಂದು ಹೇಳಿದ್ದಾರೆ.

ತಮ್ಮ ಹೆಸರು ಸಮಾಜದಲ್ಲಿ ಸ್ಥಿರವಾಗಿ ಉಳಿಯಬೇಕು, ಉಳಿಯುವಂತೆ ಮಾಡಬೇಕೆನ್ನುವ ಹಂಬಲ ಎಲ್ಲಾ ಹಂತದ ವ್ಯಕ್ತಿಗಳಲ್ಲಿ ಮನೆಮಾಡಿಕೊಂಡಿರುವುದನ್ನು ಗುರುತಿಸಬಹುದು. ಹುಡುಗರು, ದಾರಿಯ ಪಕ್ಕದಲ್ಲಿರುವ ಬಂಡೆಗಳ ಮೇಲೆ, ಗೋಡೆಗಳು, ಬೆಂಚುಗಳ ಮೇಲೆ, ಬಸ್ಸು ಸೀಟುಗಳ ಹಿಂಭಾಗದಲ್ಲಿ ಹೆಸರನ್ನು ಕೆತ್ತಿರುವುದನ್ನು ಕಾಣಬಹುದು. ಅವರಿಗೆ ಕೀರ್ತಿ, ಹೆಸರುಗಳ ಬಗ್ಗೆ ಕಲ್ಪನೆ ಆ ಸಂದರ್ಭದಲ್ಲಿ ಇಲ್ಲದೇ ಹೋದರೂ, ಪರೋಕ್ಷವಾಗಿ ಈ ಗುಣ ಬೆಳವಣಿಗೆ ಆಗುತ್ತಿರುವುದನ್ನು ಗಮನಿಸಬಹುದು.

ಇತಿಹಾಸ, ಪುರಾಣಗಳ ಪುಟಗಳ ಮೇಲೆ ಕಣ್ಣಾಡಿಸಿದರೆ, ಸಾವಿರಾರು

ಜನ ರಾಜರುಗಳು ಆಗಿ ಹೋಗಿರುವುದನ್ನು ಕಾಣಬಹುದು. ಅವರೆ ಅವರು ತಮ್ಮ ಹೆಸರು, ಕೀರ್ತಿ, ನಾಲು ದಿಕ್ಕುಗಳಿಗೂ ವ್ಯಾಪಿಸಬೇಕು, ಸೂರ್ಯ ಚಂದ್ರರಿರುವವರೆಗೂ ಉಳಿಯಬೇಕೆಂಬ ಭ್ರಮೆಯಿಂದ ರಾಜ್ಯವನ್ನು ವಿಸ್ತರಿಸಲು ಹೋಗಿ ಸಾವಿರಾರು ಜನ ನಿರಪರಾಧಿಗಳನ್ನು ಬಲಿ ತೆಗೆದುಕೊಂಡು ಅವರ ಗೋರಿಗಳ ಮೇಲೆ ತಮ್ಮ ಕೀರ್ತಿ ಪತಾಕೆಯನ್ನು ಹಾರಿಸಿ ಸಂತೋಷಪಟ್ಟು, ಕೊನೆಗೆ ಹೇಳ ಹೆಸರಿಲ್ಲದೆ ಮಣ್ಣಲ್ಲಿ ಮಣ್ಣಾಗಿ ಹೋಗಿದ್ದಾರೆ. ಅವರು ಕಟ್ಟಿಸಿದ ಸ್ಮಾರಕಗಳು, ಭವ್ಯವಾದ ಅರಮನೆ, ಕೋಟೆ ಕೊತ್ತಲುಗಳು, ಕೆತ್ತಿಸಿದ ಶಾಸನಗಳು ಪಾಳು ಬಿದ್ದಿವೆ. ಅವರು ಮೆರೆಯುತ್ತಿದ್ದ ಒಡ್ಡೋಲಗಗಳಲ್ಲಿ ಇಂದು ಕಾಡುಕತ್ತೆಗಳು, ನರಿಗಳು ಮೆರೆಯುತ್ತಿವೆ. ದಾರ್ಶನಿಕ ಕವಿ ಉಮರ್ ಖಯಾಮ್ ಒಂದು ಕಡೆ

ಈ ಪುರಾತನ ಜೀರ್ಣ ಧರ್ಮ ಶಾಲೆಗಳಮುಮ
ಇರುಳು ಹಗಲುಗಳೆಂಬ ಬಾಗಿಲೆರಡರಲಿ
ಏಸು ಜನ ಸುಲ್ತಾನರು ಅಟ್ಟಹಾಸದಿ ಪೊಕ್ಕು
ಒಂದೆರಡು ತಾಸು ಇದ್ದು ನಿಲದೆ ತೆರಳಿದರ್

ಎಂದಿದ್ದಾನೆ. ಅವನ ದೃಷ್ಟಿಯಲ್ಲಿ ಇಡೀ ವಿಶ್ವವೇ ಒಂದು ಬಗೆಯ ಧರ್ಮ ಛತ್ರ. ಇದಕ್ಕೆ ಹಗಲು ಮತ್ತು ಇರುಳು ಎಂಬ ಎರಡು ಮಹಾ ದ್ವಾರಗಳು. ಈ ಛತ್ರಕ್ಕೆ ದಿನ ನಿತ್ಯ ಲಕ್ಷಾಂತರ ಜನ ಯಾತ್ರಿಕರು ಮುಂಜಾನೆ ಬಂದು ಕೆಲವು ಕಾಲ ತಂಗಿದ್ದು ಸಂಜೆಯಾದೊಡನೆ ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗುವಂತೆ, ಸಾವಿರಾರು ಜನ ರಾಜರು ಸ್ವಲ್ಪಕಾಲ ಮೆರೆದು ಮಣ್ಣಲ್ಲಿ ಮಣ್ಣಾಗಿ ಹೋಗಿದ್ದಾರೆ ಎನ್ನುವಲ್ಲಿ ಹೆಸರು, ಕೀರ್ತಿ ಇವುಗಳ ನಶ್ವರತೆಯ ಬಗ್ಗೆ ಮುಟ್ಟುವಂತೆ, ತಟ್ಟುವಂತೆ ಹೇಳಿದ್ದಾನೆ.

ಕೆಲವರಿಗೆ ದಿನ ಬೆಳಗಾದರೆ ಗಲಾಟೆ ಮಾಡಿ, ಹೇಗಾದರೂ ಹೆಸರು ಮಾಡಬೇಕು ಎನ್ನುವ ಬಯಕೆ ತಮ್ಮಲ್ಲಿ ಗುಪ್ತಗಾಮಿನಿಯಾಗಿ ಸದಾ ಹರಿಯುತ್ತಿರುವ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ಅನೇಕ ವಾಮ ಮಾರ್ಗಗಳನ್ನು ಬಳಸಿಕೊಂಡು ಪ್ರಸಿದ್ಧರಾಗಲು ಹವಣಿಸುತ್ತಾರೆ. ಇಂಥವರನ್ನು ಕಂಡು ಡಿ.ವಿ.ಜಿ. ಯವರು

ಎದ್ದೆದ್ದು ಬೀಳುತಿಹೆ ಗುದ್ದಾಡಿ ಸೋಲುತಿಹೆ
ಗದ್ದಲವ ತುಂಬಿ ಪ್ರಸಿದ್ಧನಾಗುತಿಹೆ
ಉದ್ಧರಿಸುವೆನು ಜಗವನೆನ್ನುತಿಹ ಸಖನ ನಿ
ನ್ನುದ್ಧಾರವೆಷ್ಟಾಯ್ತೊ-ಮಂಕುತಿಮ್ಮ

(58ನೇ ಪುಟ ನೋಡಿ)



# ಬಸವ ಪ್ರತಿಜ್ಞಾ

—ಟಿ. ಎಸ್. ಮಹಾದೇವಯ್ಯ

"ಎನಿಸೆನಿಸೆಂದರೆ ನಾ ಧೃತಿಗೆಡೆನಯ್ಯ, ಎಲು ದೋರಿದರೆ, ನರ ಹರಿದರೆ, ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯ, ಸಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ, ನಾಲಿಗೆ ಕೂಡಲ ಸಂಗ ಶರಣೆನುತಿದ್ದಿತಯ್ಯ."

ಹಿಂವ ತಿಳಿನೀರಿಗೆ ಪ್ರಚಂಡವಾದ ಚಳಿಗಾಳಿ ತಗುಲಿದರೆ ಹೇಮಂತನ ಸಾಮ್ರಾಜ್ಯದಲ್ಲಿ, ಹೆಪ್ಪುಗಟ್ಟಿ ಮಂಜಿನ ಗಡ್ಡೆಯಾಗುವುದು. ಅಮಾವಾಸ್ಯೆಯ ಕಾರ್ಮೋಡದ ನಭದಲ್ಲಿ ಹರಡಿದ ಕತ್ತಲೆಯು ಭಯಂಕರವಾಗಿ ಘನೀಭೂತವಾಗುವುದು. ಚಳಿಗಾಳಿಯ ನೋವಿನಿಂದ ನರಳಿದ ಬನಸಿರಿಯು ಬಿಡಿಯಾದರೂ ಬಸಂತನ ಸುಮಧುರ ಮಂದಮಾರುತವು ಬೀಸಲಾರಂಭಿಸಿದ ಕೂಡಲೆ ಕಾಲಾನಂತರ ನಿಬಿಡವಾಗಿ ಸೂರ್ಯಕಿರಣಕ್ಕೆ ಸ್ಥಳಕೊಡದಂತೆ ಒತ್ತಾಗಿ ನಿಲ್ಲುವುದು. ಹಾಗೆಯೇ ಮನುಷ್ಯನ ಅಂತಃಕರಣವೂ ಪ್ರೇಮರಾಜ್ಯದಲ್ಲಿ ಅಡಿಯಿಡುತ್ತ ಮುಂದುವರಿದರೆ, ಅಭಿಮಾನ ಹೆಚ್ಚಿದ ಹಾಗೆಲ್ಲಾ, ಗಟ್ಟಿಯಾಗುವುದು. ಭಕ್ತನ ಭಕ್ತಿಯು ಭಕ್ತಿಸ್ಥಲದಲ್ಲಿ ಶ್ರದ್ಧೆಯುಳ್ಳದ್ದಾಗಿರುತ್ತದೆ. ಸುವ್ಯವಸ್ಥಿತವಾದ ಆಕಾರವನ್ನು ಇನ್ನೂ ಹೊಂದಿರುವುದಿಲ್ಲ. ಭಕ್ತನು ತನ್ನ ಅನುಭವದಿಂದ ದೇವನ ಚರಣಗಳಲ್ಲಿ ಆತ್ಮಾರ್ಪಣೆಮಾಡಿ ಹೆಚ್ಚು ಹೆಚ್ಚು ಆರಾಧನೆಮಾಡಿದಂತೆಲ್ಲಾ, ಅವನ ಭಕ್ತಿಯು ಹೆಪ್ಪುಗಟ್ಟುತ್ತದೆ. ಅದನ್ನೇ ವೀರಶೈವರಲ್ಲಿ "ಮಾಹೇಶ್ವರಸ್ಥಲ" ವೆಂದು ಕರೆದಿರುವರು. ಆಗ "ಶ್ರದ್ಧಾಭಕ್ತಿ" ಯು "ನಿಷ್ಠಾಭಕ್ತಿ" ಯಾಗುತ್ತದೆ. ಆ ಭಕ್ತಿಗೆ ಒಂದು ಉಗ್ರ ಸ್ವರೂಪವು ಬರುತ್ತದೆ. ಮನುಷ್ಯನ ಆ ಸ್ಥಿತಿಯಲ್ಲಿ ದೇವನಲ್ಲಿ ಅವನಿಗಿರುವ ಪ್ರೇಮದ ಬಗ್ಗೆ, 'ಚ'ಕಾರ ಶಬ್ದವೆತ್ತಿದರೂ ಅವನ ಅಂತಃಕರಣವು ಅದನ್ನು ಸಹಿಸಲಾರದು. ತನ್ನ ಜೀವವನ್ನು ಕೊಟ್ಟಾನು, ತನ್ನ ಸರ್ವಸ್ವವನ್ನು ಕೊಟ್ಟಾನು, ಆದರೆ ಭಕ್ತಿಯ ಮುದ್ದೆಯಿಂದ ಒಂದು ಅಣುವನ್ನು ಬೇರ್ಪಡಿಸಲಾರನು. ಅವನು ಹೃದಯದ ಸಿಂಹಾಸನದಲ್ಲಿ ಆರಾಧಿಸುವ ದೇವತೆಯ ನಾಮಕ್ಕೆ ಮತ್ತು ರೂಪಕ್ಕೆ ಅಣುವಿನಷ್ಟು ಕಲಂಕವಾದರೂ ಹತ್ತಗೊಡುವುದಿಲ್ಲ ಅದಕ್ಕೇ ಸ್ವಾಮಿ ವಿವೇಕಾನಂದರು ಭಕ್ತರ ಈ ಆತ್ಮಬಲವನ್ನು ಕುರಿತು ಹೀಗೆ ಅಂದಿರುವರು.

"ನೂರಾರು ಕಷ್ಟಗಳ ಹಾದಿಯಲ್ಲಿ ನಿಷ್ಠೆಯುಳ್ಳ ಆತ್ಮ ಬಲವೊಂದೇ ಮುಂದುವರಿಯಬಲ್ಲುದುದು ಮಾಯಾ ಬಲೆಯನ್ನು ಹರಿಯುವ ಅತ್ಯಂತ ಕಠಿಣತಮವಾದ ಕೆಲಸವು ಪ್ರಚಂಡವಾದ ಆತ್ಮಬಲದಿಂದ ಮಾತ್ರ ಸಾಧ್ಯ" ಇದನ್ನು ಬಸವೇಶ್ವರನು

ಸಾಧಿಸಿರುತ್ತಾನೆ. ಆ ಸ್ಥಿತಿಯಲ್ಲಿ ಪಂಚೇಂದ್ರಿಯಗಳ ವೃತ್ತಿಗಳೆಲ್ಲಾ ಅಡಗಿಹೋಗುವುವು. ಪ್ರವೃತ್ತಿಗಳೆಲ್ಲಾ ಕರಗಿ ನೀರಾಗಿ ಪ್ರೇಮದ ಜ್ಯೋತಿಯು ಬೆಳಗುವುದು. ಉಗ್ರ ಸ್ವರೂಪದಿಂದ ಪ್ರಜ್ವಲಿಸುವುದು. ತನುವಿನ ಮೇಲಿನ ಮಮಕಾರವು ಪೂರ್ಣವಾಗಿ ನಾಶವಾಗುವುದು. ಅವರ ನುಡಿಗಳು ಕವಿ ರವೀಂದ್ರನಾಥರ ಈ ನುಡಿಗಳಂತಿರುವುವು. Let all my songs gather together their divine strains into a single current and flow to a sea of silence in one salvation to thee. "ನನ್ನ ಜೀವನದಲ್ಲಿ ಸಿಕ್ಕಿದ ಕಡೆ ಹರಿವ ಗಾನಗಳೆಲ್ಲ ಸಮ್ಮಿಳಿತವಾಗಿ ಒಂದು ಪ್ರವಾಹ ರೂಪದಲ್ಲಿ ನಿನಗೆ ವಂದನೆಗಳನ್ನರ್ಪಿಸುತ್ತ ಶಾಂತಿಕಡಲಿಗಿಳಿಯಲಿ"

ಅವರ ರೋಮರೋಮಗಳಲ್ಲೂ ಭಕ್ತಿಯ ವಾಸನೆ ಹರಡುವುದು. ಧುಮುನೆ, ಹರಿವ ಬಿಸಿ ರಕ್ತದ ನರದಲ್ಲೆಲ್ಲಾ ಜಯಜಯ, ಶರಣು ಶರಣು ದೇವಾ ಎಂಬ ಧ್ವನಿಯೊಂದೆ ಶಬ್ದ ಮಾಡುತ್ತಾ ಹರಿಯುವುದು. ಅವನ ವಾತಾವರಣವೆಲ್ಲಾ ಭಕ್ತಿಯ ಸುವಾಸನೆಯಿಂದ ತುಂಬಿ ವಿಶ್ವಕ್ಕೆ ಸುಗ್ಗಿಯ ಸೂರೆಗೊಡುವುದು. ಈ ಬಗೆಯ ಅನುಷ್ಠಾನವು ಅತ್ಯಂತ ಶ್ರೇಷ್ಠತರವಾದುದಾಗಿದೆ. ಜೀವಿಗಳ ಹೊರಗೆಡಹುವ ಈ ಶ್ಲೋಕವು ಸಿದ್ಧಾಂತ ಶಿಖಾಮಣಿಯಿಂದ ತೆಗೆಯಲ್ಪಟ್ಟಿದೆ. "ಅಪಗಚ್ಛಂತು ಸರ್ವಸ್ವಂ ಶಿರಚ್ಛೇದನಮಸ್ತು ಷಾ। ಮಾಹೇಶ್ವರೋ ನ ಮುಂಚೇತ ಲಿಂಗ ಪೂಜಾ ಮಹಾವ್ರತಂ"–ತನ್ನ ಸರ್ವಸ್ವವೂ ನಾಶವಾಗಿ ಹೋದರೂ ಹೋಗಲಿ, ಶಿರಸ್ಸು ಕತ್ತರಿಸಿ ಕೆಳಗೆ ಬಿದ್ದರೂ ಬಿದ್ದುಹೋಗಲಿ ಮಾಹೇಶ್ವರನು ಲಿಂಗಪೂಜೆಯ ತನ್ನ ಪವಿತ್ರ ವ್ರತವನ್ನು ಬಿಡುವುದಿಲ್ಲ. ಭಕ್ತಿಯ ಸಂಬಂಧವು ಅಷ್ಟು ಬಲವಾಗಿರುತ್ತದೆ. ಶ್ರೀಕೃಷ್ಣನು ಗೀತೆಯಲ್ಲಿ ಹೇಳಿರುವ ಈ ನುಡಿಗಳನ್ನು ನೋಡಿರಿ. "ಮಯ್ಯಾವೇಶ್ಯಮನೋಯೆ ಮಾಂ ನಿತ್ಯಯುಕ್ತಾ ಉಪಾಸತೇ। ಶ್ರದ್ಧಯಾ ಪರಯೋಪೇತಾಸ್ತೇಮ್ಮೆಯುಕ್ತ ತಮಾ ಮತಾಃ"–"ಅತ್ಯಂತ ಶ್ರದ್ಧಾಯುಕ್ತರಾಗಿ ನನ್ನಲ್ಲಿ ಚಿತ್ತವಿಟ್ಟು ಯಾವ ನಿತ್ಯಯುಕ್ತರು ನನ್ನನ್ನು ಭಜಿಸುವರೋ ಅವರು ಎಲ್ಲಕ್ಕೂ ಹೆಚ್ಚಿನ ಯೋಗಿಗಳೆಂದು ನನ್ನ ಅಭಿಪ್ರಾಯವು." ಶ್ರದ್ಧಾವಸ್ಥೆಯು ನಿಷ್ಠೆಯ ಪಾಕವನ್ನು ಹೊಂದಿರುವುದರಿಂದ ಬಸವೇಶ್ವರನು ಶ್ರೇಷ್ಠತರನಾದ ಯೋಗಿಯ ಅವಸ್ಥೆಯನ್ನೂ ಮೀರಿರುತ್ತಾನೆ. ಈ ಯೋಗದ ಅನುಭವವೇ ಅವರಿಗೆ ಪರಮಾತ್ಮನ ಜ್ಯೋತಿಯ ಕಾಂತಿಯನ್ನು ಕಣ್ಣು ಚುಚ್ಚುವಂತೆ ತೋರುವುದು. ಧರ್ಮದ ಬೆಳಕು ಬೆಳಗುವುದು ಅದಕ್ಕಾಗಿಯೇ ಸ್ವಾಮಿ ರಾಮತೀರ್ಥರು ನಿಜವಾದ ಧರ್ಮ ರಹಸ್ಯವು ಈಶ್ವರನ ಮೇಲಿನ ವಿಶ್ವಾಸದಲ್ಲಿರುವುದಿಲ್ಲ, ಆದರೆ ಮನುಷ್ಯನಲ್ಲಿಯ ಈಶ್ವರತ್ವದ ಮೇಲಿನ ಅಚಲ ಶ್ರದ್ಧೆಯಲ್ಲಿರುತ್ತದೆ ಎಂದಿರುವರು. ತನುವು ತುಚ್ಛವಾಗಿ ದೇವನ ಮೆಚ್ಚಿಗೆಯಾಗಿ ಉಗ್ರ ಸ್ವರೂಪದಿಂದ ಬಸವೇಶ್ವರನು ಗರ್ಜಿಸಿದ ಗರ್ಜನೆಯಿದು.



ದೇವನನ್ನು ನಾವು ಪೂಜಿಸುವ ವಿಷಯವಾಗಿ ದೇವನನ್ನು ಅರಿಯಲಾಗದ ಹೇಡಿಗಳು, ನನ್ನ ವಿಷಯವಾಗಿ ಏನನ್ನು ನುಡಿದರೂ ಪೂಜೆಗೆ ಕಲಂಕ ಹತ್ತಿಸಿ ಹಿಂಜರಿಯುವಷ್ಟು ಅಧಮನಾಗಿಲ್ಲ. ದೇವನ ಔಪಾಸನಾಕ್ರಮದಲ್ಲಿ ಮಾಂಸಖಂಡಗಳು ಬತ್ತಿಹೋಗಿ, ರಕ್ತವು ಆವಿಯಾಗಿ, ಬರೇ ಮೂಳೆಗಳು ಕಾಣಿಸುತ್ತಿರಲಿ, ಶರೀರದಲ್ಲಿ ಅಖಂಡವಾಗಿ ಹರಡಿರುವ ನರಗಳೆಲ್ಲಾ ತುಂಡುತುಂಡಾಗಿ ಕತ್ತರಿಸಿಹೋಗಲಿ, ನನ್ನ ಕರುಳುಗಳನ್ನು ಕಿತ್ತು ಬೇಕಾದರೆ ಕೆಳಗಿಟ್ಟುಬಿಡಿರಿ, ಹಾಗಾದರೂ ನಾನು ಎದೆಗುಂದುವುದಿಲ್ಲ. ಹೇಡಿಯಾಗಿ ದೇವನನ್ನು ನೆನೆಯುವುದಿಲ್ಲ, ಕುತ್ತಿಗೆ ಕತ್ತರಿಸಿ, ನಾಲಿಗೆ ತುಂಡಾಗಿ ನೆಲಕ್ಕೆ ಬಿದ್ದರೂ, ಅದು ಪೂರ್ಣ ಪ್ರೇಮದಿಂದ "ಕೂಡಲ ಸಂಗಮದೇವಾ ಶರಣು ಶರಣು ವಂದು ನುಡಿಯುತ್ತಿರುತ್ತದೆ". ಒಣಗಿಸಿ ಎನ್ನ ಗಣ ಘಣಿಸಿ ಮಾಡಿದಡೆಯೂ, ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದಮಾಣೆ ಮಾಣೆ, ಶರಣೆಂಬುದ ಮಾಣೆಮಾಣೆ, ಕೂಡಲ ಸಂಗಮ ದೇವಯ್ಯ ಎನ್ನ ಹೆಣನ ಮೇಲೆ ಕಂಚೆಟ್ಟುಂಡದೆಯೂ ಮಾಣೆಮಾಣೆ"–ನನ್ನ ಶರೀರವನ್ನು ಪ್ರಚಂಡವಾದ ಅಗ್ನಿಯ ಶಾಖದಿಂದಾಗಲಿ, ಉರಿವ ಬೇಸಗೆಯ ಬಿಸಿಲಿಂದಾಗಲಿ, ಅನ್ನ ನೀರುಗಳನ್ನು ಕೊಡದೆ ಚೆನ್ನಾಗಿ ಒಣಗಿಸಿಬಿಟ್ಟರೂ, ಕುಟುಕು ಜೀವವಿರುವತನಕ ನಿಮ್ಮ ಚರಣಗಳನ್ನು ನೆನೆಯುವುದನ್ನು ಬಿಡುವುದಿಲ್ಲ. ಶರಣು ದೇವಾ ನಿನಗೆ ಎಂಬುದನ್ನು ಖಂಡಿತವಾಗಿ ಬಿಡುವುದಿಲ್ಲ. ನನ್ನ ಜೀವ ಹೋದರೂ ನಿಮ್ಮ ಧ್ಯಾನವನ್ನು ನಿಜವಾಗಿ ಬಿಡುವುದಿಲ್ಲ" ವೆಂದು ಪ್ರತಿಜ್ಞಾಪೂರ್ವಕವಾಗಿ ನುಡಿದು ಬಸವೇಶ್ವರನು ತನ್ನ ಆತ್ಮಬಲವನ್ನು ಪ್ರಕಟಗೊಳಿಸಿರುವನು.

# ಭುವಿಗಿಳಿದ ಶಿವತಾನು ಇವರಿಗೊಲಿದ

## 18–ಭಕ್ತ ಅಮರನೀತಿ


—ಹೆಚ್. ಜಿ. ರಾಧಾದೇವಿ,

ನಂ, 12, 1. 17/4, ಬೀದೀಲುನಾಗಮ್ಮ ಮನೆ, ಗುಂಚ್ ರಸ್ತೆ ರಾಯಚೂರು-584101


ಚೋಳ ದೇಶದಲ್ಲಿ ತಿರುನಲ್ಲೂರು ಎಂಬ ಗ್ರಾಮ. ಆ ಗ್ರಾಮದಲ್ಲಿ ಅಮರನೀತಿ ಎಂಬ ಒಬ್ಬ ಶಿವಭಕ್ತನಿದ್ದ. ಪ್ರತಿದಿನ ಅವನು ಶಿವಾಲಯಕ್ಕೆ ಹೋಗಿ ಗಂಧ ತಾಂಬೂಲಗಳಿಂದ ಶಿವನನ್ನು ಭಕ್ತಿಯಿಂದ ಅರ್ಚಿಸಿ ಶೋಡ ಶೋಪಪಚಾರದಿಂದ ಪೂಜೆ ಮಾಡುತ್ತಿದ್ದ. ಒಮ್ಮೆ ಅವನಿಗೆ ಯಾರೋ ವಸ್ತ್ರ ದಾನದ ಮಹಾತ್ಮೆಯನ್ನು ಹೇಳಿದರು.

ಶಿವ ಪ್ರೀತಿಗಾಗಿ ತಾನು ವಸ್ತ್ರದಾನ ಮಾಡಬೇಕೆಂದು ಅಮರನೀತಿಗೆ ತೋರಿತು. ಅಂದಿನಿಂದಲೆ ಅದನ್ನ ವ್ರತವಾಗಿ ಆರಂಭಿಸಿದ. ಅಪರಿಮಿತ ಶ್ರೀಮಂತನಾದ ಅವನು ಪಚ್ಚೆ ಮುಡಿ, ಕಂಕಾಪನ ವಸ್ತ್ರಗಳಿಂದ ಹಿಡಿದು ರೇಸಿಮೆಯ ಪೀತಾಂಬರ, ಚೀನಾಂಬರಗಳನ್ನು ಸಹಾ ದಾನ ಮಾಡಲಾರಂಭಿಸಿದ.

ಲತಾವಳಿ, ಪುಷ್ಪಾವಳಿ, ನೇತ್ರಾವಳಿ. ಚಿತ್ರಾವಳಿ, ಗಜಾವಳಿ, ಸಿಂಹಾವಳಿ ಹಂಸಾವಳಿ ಎಂಬ ಹೆಸರಿನ ಬಗೆ ಬಗೆ ರೇಷ್ಮೆಯ ವಸ್ತ್ರಗಳನ್ನು ತರಿಸಿ ಕೆಲವನ್ನು ಶಿವ ಲಿಂಗಕ್ಕೆ ಹೊದಿಸಿ ಕೆಲವನ್ನು ನಡೆಮುಡಿ ಹಾಸಿ ಕೆಲವನ್ನು ರುದ್ರ ಗಣಗಳ ಹೆಸರಲ್ಲಿ ಕೆಲವನ್ನು ಪಾರ್ವತಿದೇವಿಯವರ ಹೆಸರಲ್ಲಿ ಕೆಲವನ್ನು ಗುಹ ಗಣಪರ ಹೆಸರಲ್ಲಿ ದಾನ ಮಾಡುವನು.

ಇವನ ದಾನ ಸ್ವೀಕರಿಸಿತು. ಊರೂರಿಂದ ಬರುವರು. ಜಂಗಮರು ಜಂಗಮರಲ್ಲದವರು, ವಸ್ತ್ರದಾಸೆಗಾಗಿ ಶಿವನಾಮ ಉಚ್ಚರಿಸಿತ್ತ ಬರುವರು.

ಅಮರನೀತಿ ಭುವಿಯಲ್ಲಿ ಮಾಡಿದ ಈ ಭಕ್ತಿ ಕೆಲವು ಸಂವತ್ಸರದೊಳಗೆ ಕೈಲಾಸಕ್ಕು ಹಬ್ಬಿತು. ಕೈಲಾಸದಲ್ಲಿ ಅಮರ ನೀತಿಯ ಭಕ್ತಿಯ ಮಹಿಮೆಯಿಂದ ನೆಲದಲ್ಲಿ ಎಲ್ಲೆಲ್ಲೂ ಚಿನಾಂಬರದ ಹಾಸುಮಡಿ ಎದ್ದವು.

ಶಿವನ ಮೈಮೇಲೆ ಗಜಚರ್ಮ, ಪುಲಿಚರ್ಮಗಳು ಮಾಯವಾಗಿ ಹೊಸದಾದ ರೇಸಿಮೆ ವಸ್ತ್ರಗಳು ಕಾಣಿಸಿ ಕಂಗೊಳಿಸಹತ್ತಿದವು. ಪಾರ್ವತಿದೇವಿಯ

# ಭುವಿಗಿಳಿದ ಶಿವತಾನು ಇವರಿಗೊಲಿದ

## 18–ಭಕ್ತ ಅಮರನೀತಿ

—ಹೆಚ್. ಜಿ. ರಾಧಾದೇವಿ,
ನಂ, 12, 1. 17/4, ಬೀದೀಲುನಾಗಮ್ಮ ಮನೆ, ಗುಂಚ್ ರಸ್ತೆ ರಾಯಚೂರು-584101

ಚೋಳ ದೇಶದಲ್ಲಿ ತಿರುನಲ್ಲೂರು ಎಂಬ ಗ್ರಾಮ. ಆ ಗ್ರಾಮದಲ್ಲಿ ಅಮರನೀತಿ ಎಂಬ ಒಬ್ಬ ಶಿವಭಕ್ತನಿದ್ದ. ಪ್ರತಿದಿನ ಅವನು ಶಿವಾಲಯಕ್ಕೆ ಹೋಗಿ ಗಂಧ ತಾಂಬೂಲಗಳಿಂದ ಶಿವನನ್ನು ಭಕ್ತಿಯಿಂದ ಅರ್ಚಿಸಿ ಶೋಡಶೋಪಚಾರದಿಂದ ಪೂಜೆ ಮಾಡುತ್ತಿದ್ದ. ಒಮ್ಮೆ ಅವನಿಗೆ ಯಾರೋ ವಸ್ತ್ರ ದಾನದ ಮಹಾತ್ಮೆಯನ್ನು ಹೇಳಿದರು.

ಶಿವ ಪ್ರೀತಿಗಾಗಿ ತಾನು ವಸ್ತ್ರದಾನ ಮಾಡಬೇಕೆಂದು ಅಮರನೀತಿಗೆ ತೋರಿತು. ಅಂದಿನಿಂದಲೆ ಅದನ್ನ ವ್ರತವಾಗಿ ಆರಂಭಿಸಿದ. ಅಪರಿಮಿತ ಶ್ರೀಮಂತನಾದ ಅವನು ಪಚ್ಚೆ ಮಡಿ, ಕಂಕಾಪನ ವಸ್ತ್ರಗಳಿಂದ ಹಿಡಿದು ರೇಸಿಮೆಯ ಪೀತಾಂಬರ, ಚೀನಾಂಬರಗಳನ್ನು ಸಹಾ ದಾನ ಮಾಡಲಾರಂಭಿಸಿದ.

ಲತಾವಳಿ, ಪುಷ್ಪಾವಳಿ, ನೇತ್ರಾವಳಿ, ಚಿತ್ರಾವಳಿ, ಗಜಾವಳಿ, ಸಿಂಹಾವಳಿ ಹಂಸಾವಳಿ ಎಂಬ ಹೆಸರಿನ ಬಗೆ ಬಗೆ ರೇಷ್ಮೆಯ ವಸ್ತ್ರಗಳನ್ನು ತರಿಸಿ ಕೆಲವನ್ನು ಶಿವಲಿಂಗಕ್ಕೆ ಹೊದಿಸಿ ಕೆಲವನ್ನು ನಡೆಮುಡಿ ಹಾಸಿ ಕೆಲವನ್ನು ರುದ್ರ ಗಣಗಳ ಹೆಸರಲ್ಲಿ ಕೆಲವನ್ನು ಪಾರ್ವತಿದೇವಿಯವರ ಹೆಸರಲ್ಲಿ ಕೆಲವನ್ನು ಗುಹ ಗಣಪರ ಹೆಸರಲ್ಲಿ ದಾನ ಮಾಡುವನು.

ಇವನ ದಾನ ಸ್ವೀಕರಿಸಿತು. ಊರೂರಿಂದ ಬರುವರು. ಜಂಗಮರು ಜಂಗಮರಲ್ಲದವರು, ವಸ್ತ್ರದಾಸೆಗಾಗಿ ಶಿವನಾಮ ಉಚ್ಚರಿಸಿತ್ತ ಬರುವರು.

ಅಮರನೀತಿ ಭುವಿಯಲ್ಲಿ ಮಾಡಿದ ಈ ಭಕ್ತಿ ಕೆಲವು ಸಂವತ್ಸರದೊಳಗೆ ಕೈಲಾಸಕ್ಕು ಹಬ್ಬಿತು. ಕೈಲಾಸದಲ್ಲಿ ಅಮರ ನೀತಿಯ ಭಕ್ತಿಯ ಮಹಿಮೆಯಿಂದ ನೆಲದಲ್ಲಿ ಎಲ್ಲೆಲ್ಲೂ ಚಿನಾಂಬರದ ಹಾಸುಮಡಿ ಎದ್ದವು.

ಶಿವನ ಮೈಮೇಲೆ ಗಜಚರ್ಮ, ಹುಲಿಚರ್ಮಗಳು ಮಾಯವಾಗಿ ಹೊಸದಾದ ರೇಸಿಮೆ ವಸ್ತ್ರಗಳು ಕಾಣಿಸಿ ಕಂಗೊಳಿಸಹತ್ತಿದವು. ಪಾರ್ವತಿದೇವಿಯ



ಮೈಮೇಲಂತು ದಿನಕ್ಕೊಂದು ಬಗೆಯ ರೇಸಿಮೆಯ ಸೀರೆ....ಬಗೆ ಬಗೆಯ ಅಂಚು ಸೆರಗಿನ ವಿನ್ಯಾಸ, ಗುಹಗಣಪರ ಮೈಮೇಲೆ ಪಟ್ಟೆಮಡಿ ಪೀತಾಂಬರಗಳು....ರುದ್ರ ಗಣರ ಹಾಗು ಪಾರ್ವತಿದೇವಿಯವರ ಸಖಿಯರ ಮೈಮೇಲು ದಿನದಿನಕ್ಕೆ ನೂತನ ವಸ್ತ್ರಗಳು ಕಂಗೊಳಿಸ ತೊಡಗಿದವು.

ಇಡೀ ಕೈಲಾಸವೇ ಆಶ್ಚರ್ಯದಲ್ಲಿ ಮುಳುಗಿತು. ತನ್ನ ಭಕ್ತ ಅಮರನೀತಿಯ ಕಾರ್ಯವಿದೆಂದು ಶಿವನಿಗೆ ತಿಳಿಯಿತು. ಶಿವ ವೃದ್ಧ ಜಂಗಮನ ವೇಷಧರಿಸಿ ಭೂಮಿಗೆ ಇಳಿದು ಅಮರನೀತಿಯ ಬಳಿ ಬಂದ. ಅಮರನೀತಿ ಎಂದಿನಂತೆ ಶಿವಾರ್ಪಣವೆನ್ನುತಾ ಭಕ್ತರಿಗೆಲ್ಲಾ ವಸ್ತ್ರಗಳನ್ನು ಹಂಚುತ್ತಿದ್ದಾನೆ,

ವಸ್ತ್ರ ಪಡೆದವರೆಲ್ಲ ಅಮರನೀತಿ ಹರಸಿ ಹೊರಟರು.

ಅಮರನೀತಿಯ ಕಣ್ಣಿಗೆ ಕೌಪೀನ ಮಾತ್ರ ಧರಿಸಿದ್ದ ಈ ಕಪಟ ಜಂಗಮ ಕಾಣಿಸಿದ, ಅಮರನೀತಿ ಆತನ ಬಳಿ ಓಡಿಬಂದ. “ ಎಲೆ ತಂದೆ....ಏಕೆ ಕೌಪೀನ ಒಂದೇ ಧರಿಸಿದ್ದಿರಿ— ಇಗಾ ಈ ಪಟ್ಟೆಮಡಿ ವಸ್ತ್ರ ಉಡಿರಿ—ಇದನು ಹೊದೆಯಿರಿ, ಇದು ನಾಳೆಗೆ...ಇದು ನಾಳದ್ದಿಗೆ—ಹೀಗೆ ಎಂಟು ದಿನದ ಬದಲಾವಣೆಗೆ ಆಗುವಷ್ಟು ಉಡುಪಿದೆ ಕೊಳ್ಳಿರಿ ” ಎಂದು ರೇಸಿಮೆ ವಸ್ತ್ರದ ಒಂದು ದೊಡ್ಡ ಗಂಟನ್ನೆ ಇರಿಸಿದ.

ಕಪಟ ಜಂಗಮ ನಕ್ಕು ಬಿಟ್ಟ.... “ಎಲೋ ವ್ಯಾಪಾರಿ, ಕಂಡವರ ಬಳಿ ಎಲ್ಲಾ ನಿನ್ನ ವ್ಯಾಪಾರಿ ಬುದ್ಧಿ ಏಕೆ ತೋರಿಸುವೆ. ನಾವು ಬೇಡಲು ಬಂದವರಲ್ಲ. ಬೇಡಿದವರಿಗೆ ಬೇಕಾದ್ದನ್ನು ಈಯುವರು ನಿನ್ನಂತೆ ಇದ್ದಲ್ಲಿ ಕರೆಸಿ ದಾನ ಮಾಡುವವರಲ್ಲ. ಪ್ರತಿಯೊಬ್ಬರಿಗೂ ಅವರಿದ್ದಲ್ಲಿಗೆ ಹೋಗಿ ದಾನಮಾಡಿ ಬರುವವರು ಎಲ್ಲವನಿತ್ತು ಈಗ ಬರಿಗೈಯಿಂದ ಇಹನೆಂದು ತಿಳಿಯಬೇಡಾ—ಇಗೊ ನನ್ನ ಕೈಲಿರುವ ಈ ಕೌಪೀನ ಮಹಾ ಮಹಿಮಾನ್ವಿತವಾದದು. ಬೇಡಿದ್ದನ್ನು ಕೊಡುವಂತಾದ್ದು. ಇದನ್ನು ಒಂದು ವಾರ ರಕ್ಷಿಸಿಕೊಂಡಿರು. ನಾನು ಯಾತ್ರೆಗೆ ಹೊರಟಿದ್ದೆ. ಇದನ್ನು ಯಾರ ಬಳಿ ಇಡುವುದೆಂದು ಚಿಂತೆಯಾಗಿತ್ತು.

ನಿನ್ನ ವಸ್ತ್ರದಾನದ ಚುಟುಕು ಚೂರು ಸುದ್ದಿ ಕಿವಿಗೆ ಬಿದ್ದಿತ್ತು. ಅದಕ್ಕೆ ನಿನ್ನ ಬಳಿ ಬಂದೆ ” ಎಂದ.

ಜಂಗಮನ ಕಟಕಿ ಮಾತಿಗೆ ನೊಂದಿಕೊಳ್ಳದೆ ಅವನಿತ್ತ ಕೌಪೀನ ಪಡೆದು ಅದನ್ನು ಸುರಕ್ಷಿತವಾಗಿ ಇಟ್ಟು ಕೊಂಡಿರುವೆನೆಂದು ವಚನವಿತ್ತು ಅಮರನೀತಿ ಜಂಗಮನನ್ನು ಕಳುಹಿಸಿದ. ಮೂರು ದಿನದ ನಂತರ ಜಂಗಮ ಮರಳಿ ಬಂದು ಕೌಪೀನ ಬೇಡಿದ. ಅಮರನೀತಿ ಪೆಟ್ಟಿಗೆ ತರೆದು ನೋಡಿದರೆ ಅದು ಅಲ್ಲಿಲ್ಲ. ಜಂಗಮ ಅಮರನೀತಿಯನ್ನು ಬಾಯಿಗೆ ಬಂದಂತೆ ಬೈದ, ಮೇಲೆ ನೋಡಿದರೆ ವಸ್ತ್ರದಾನಿ,

ಮೈಮೇಲಂತು ದಿನಕ್ಕೊಂದು ಬಗೆಯ ರೇಶಿಮೆಯ ಸೀರೆ....ಬಗೆ ಬಗೆಯ ಅಂಚು ಸೆರಗಿನ ವಿನ್ಯಾಸ, ಗುಹಗಣಪರ ಮೈಮೇಲೆ ಪಟ್ಟೆಮಡಿ ಪೀತಾಂಬರಗಳು....ರುದ್ರ ಗಣರ ಹಾಗು ಪಾರ್ವತಿದೇವಿಯವರ ಸಖಿಯರ ಮೈಮೇಲು ದಿನದಿನಕ್ಕೆ ನೂತನ ವಸ್ತ್ರಗಳು ಕಂಗೊಳಿಸ ತೊಡಗಿದವು.

ಇಡೀ ಕೈಲಾಸವೇ ಆಶ್ಚರ್ಯದಲ್ಲಿ ಮುಳುಗಿತು. ತನ್ನ ಭಕ್ತ ಅಮರನೀತಿಯ ಕಾರ್ಯವಿದೆಂದು ಶಿವನಿಗೆ ತಿಳಿಯಿತು. ಶಿವ ವೃದ್ಧ ಜಂಗಮನ ವೇಷಧರಿಸಿ ಭೂಮಿಗೆ ಇಳಿದು ಅಮರನೀತಿಯ ಬಳಿ ಬಂದ. ಅಮರನೀತಿ ಎಂದಿನಂತೆ ಶಿವಾರ್ಪಣವೆನ್ನುತಾ ಭಕ್ತರಿಗೆಲ್ಲಾ ವಸ್ತ್ರಗಳನ್ನು ಹಂಚುತ್ತಿದ್ದಾನೆ,

ವಸ್ತ್ರ ಪಡೆದವರೆಲ್ಲ ಅಮರನೀತಿ ಹರಸಿ ಹೊರಟರು.

ಅಮರನೀತಿಯ ಕಣ್ಣಿಗೆ ಕೌಪೀನ ಮಾತ್ರ ಧರಿಸಿದ್ದ ಈ ಕಪಟ ಜಂಗಮ ಕಾಣಿಸಿದ, ಅಮರನೀತಿ ಆತನ ಬಳಿ ಓಡಿಬಂದ. "ಎಲೆ ತಂದೆ....ಏಕೆ ಕೌಪೀನ ಒಂದೇ ಧರಿಸಿದ್ದಿರಿ___ ಇಗಾ ಈ ಪಟ್ಟೆಮಡಿ ವಸ್ತ್ರ ಉಡಿರಿ—ಇದನು ಹೊದೆಯಿರಿ, ಇದು ನಾಳೆಗೆ...ಇದು ನಾಳದ್ದಿಗೆ—ಹೀಗೆ ಎಂಟು ದಿನದ ಬದಲಾವಣೆಗೆ ಆಗುವಷ್ಟು ಉಡುಪಿದೆ ಕೊಳ್ಳಿರಿ" ಎಂದು ರೇಶಿಮೆ ವಸ್ತ್ರದ ಒಂದು ದೊಡ್ಡ ಗಂಟನ್ನೆ ಇರಸಿದ.

ಕಪಟ ಜಂಗಮ ನಕ್ಕು ಬಿಟ್ಟ.... "ಎಲೋ ವ್ಯಾಪಾರಿ, ಕಂಡವರ ಬಳಿ ಎಲ್ಲಾ ನಿನ್ನ ವ್ಯಾಪಾರಿ ಬುದ್ಧಿ ಏಕೆ ತೋರಿಸುವೆ. ನಾವು ಬೇಡಲು ಬಂದವರಲ್ಲ. ಬೇಡಿದವರಿಗೆ ಬೇಕಾದ್ದನ್ನು ಈಯುವರು ನಿನ್ನಂತೆ ಇದ್ದಲ್ಲಿ ಕರೆಸಿ ದಾನ ಮಾಡುವವರಲ್ಲ. ಪ್ರತಿಯೊಬ್ಬರಿಗೂ ಅವರಿದ್ದಲ್ಲಿಗೆ ಹೋಗಿ ದಾನಮಾಡಿ ಬರುವವರು ಎಲ್ಲವನಿತ್ತು ಈಗ ಬರಿಗೈಯಿಂದ ಇಹೆನೆಂದು ತಿಳಿಯಬೇಡಾ—ಇಗೊ ನನ್ನ ಕೈಲಿರುವ ಈ ಕೌಪೀನ ಮಹಾ ಮಹಿಮಾನ್ವಿತವಾದದು. ಬೇಡಿದ್ದನ್ನು ಕೊಡುವಂತಾದ್ದು. ಇದನ್ನು ಒಂದು ವಾರ ರಕ್ಷಿಸಿಕೊಂಡಿರು. ನಾನು ಯಾತ್ರೆಗೆ ಹೊರಟಿದ್ದೆ. ಇದನ್ನು ಯಾರ ಬಳಿ ಇಡುವುದೆಂದು ಚಿಂತೆಯಾಗಿತ್ತು.

ನಿನ್ನ ವಸ್ತ್ರದಾನದ ಚುಟುಕು ಚೂರು ಸುದ್ದಿ ಕಿವಿಗೆ ಬಿದ್ದಿತ್ತು. ಅದಕ್ಕೆ ನಿನ್ನ ಬಳಿ ಬಂದೆ" ಎಂದ.

ಜಂಗಮನ ಕಟಕಿ ಮಾತಿಗೆ ನೊಂದಿಕೊಳ್ಳದೆ ಅವನಿತ್ತ ಕೌಪೀನ ಪಡೆದು ಅದನ್ನು ಸುರಕ್ಷಿತವಾಗಿ ಇಟ್ಟುಕೊಂಡಿರುವೆನೆಂದು ವಚನವಿತ್ತು ಅಮರನೀತಿ ಜಂಗಮನನ್ನು ಕಳುಹಿಸಿದ. ಮೂರು ದಿನದ ನಂತರ ಜಂಗಮ ಮರಳಿ ಬಂದು ಕೌಪೀನ ಬೇಡಿದ. ಅಮರನೀತಿ ಪೆಟ್ಟಿಗೆ ತರೆದು ನೋಡಿದರೆ ಅದು ಅಲ್ಲಿಲ್ಲ. ಜಂಗಮ ಅಮರನೀತಿಯನ್ನು ಬಾಯಿಗೆ ಬಂದಂತೆ ಬೈದ, ಮೇಲೆ ನೋಡಿದರೆ ವಸ್ತ್ರದಾನಿ,



ಒಳಗೆ ನೋಡಿದರೆ ನಮ್ಮಂಥಹ ಬಡವರ ವಸ್ತ್ರಾಪಹಾರಿ" ಎಂದು ನೂರಾರು ಜನ ಸೇರುವಂತೆ ಕೂಗಾಡಿದ.

ಅಮರನೀತಿ ಅವನನ್ನು ಬಗೆಬಗೆಯಾಗಿ ಸಂತೈಸಿದ, ಆದರೆ ಕಪಟ ಜಂಗಮ ಕೇಳುವನೆ? "ನನ್ನ ಕೌಪೀನಾ ನನ್ನ ಮುಂದಿಟ್ಟು ಮಾತಾಡಯ್ಯ...ಅದರ ಮಹಿಮೆ ನಿನಗೇನು ಗೊತ್ತು? ಇಡಿ ನಿನ್ನ ಅಂಗಡಿಯ ವಸ್ತ್ರದ ರಾಶಿಗಳನ್ನು ಪೇರಿಸಿದರು ಅದರ ತೂಕ ಬರಲಾರದು" ಎಂದು ಬೊಬ್ಬೆ ಹೊಡೆದ.

ಕೆಲವರು ಜಂಗಮನನ್ನು ಬೈದು "ಒಂದು ಕೌಪೀನಕ್ಕೆ ಹಾಗಾಡುವರೇನಯ್ಯ? ನೀನು ದೂಷಿಸುತ್ತಿರುವವನು ಪರಮ ಶಿವಭಕ್ತ. ಆತ ಮಹಾ ವಸ್ತ್ರದಾನಿ, ನಿನ್ನ ಆ ಕೌಪೀನಕ್ಕೆ ಬದಲು ಪೆಂಟಿಪೆಂಡೆ ವಸ್ತ್ರಗಳನ್ನು ಕೊಡುವೆ ಎನ್ನುತ್ತಿರುವ ಅದನ್ನು ಸ್ವೀಕರಿಸಿ ಕಲಹ ನಿಲ್ಲಿಸಿ ಹೋಗು" ಎಂದರು. ಜಂಗಮ ಅವರತ್ತ ತಿರುಗಿ

"ನನ್ನ ಕೌಪೀನಕ್ಕೆ ತಕ್ಕಷ್ಟು ವಸ್ತ್ರ ಕೊಡಲು ನಿಮ್ಮ ಈ ವಸ್ತ್ರದಾನಿಗೆ ಸಾಧ್ಯವೆ? ಹಾಗಾದರೆ ಒಂದು ಬಟ್ಟೆಯುಟ್ಟು ನಾನು ಧರಿಸಿರುವ ಈ ಕೌಪೀನ ತ್ರಾಸಿನಲ್ಲಿ ಇಡುತ್ತೇನೆ. ಇದು ಕಳೆದುಹೋದ ಕೌಪೀನದ ಜೊತೆಯದು. ಇದರ ತೂಕ ವಸ್ತ್ರ ಕೊಟ್ಟರೆ ಮರುಮಾತಾಡದೆ ಹೊರಟುಯೋಗುವೆ" ಎಂದ.

ಅದರಂತೆ ದೊಡ್ಡ ತ್ರಾಸು ತರಿಸಿ ತೂಗತೊಡಗಿದರು. ಪೆಂಟಿ ಪೆಂಟಿ ವಸ್ತ್ರಗಳ ರಾಶಿ ಹಾಕಿದರು. ಕೌಪೀನಾ ಹಾಕಿದ ತ್ರಾಸು ಕೆಳಗಿಳಿಯಲಿಲ್ಲ, ಮತ್ತು ದೊಡ್ಡ ತ್ರಾಸು ತರೆಸಿ ಅಮರನೀತಿಯ ಅಂಗಡಿಯ ವಸ್ತ್ರಗಳೆಲ್ಲಾ ತಂದು ಪೇರಿಸಿದರು.

ಅಮರನೀತಿ ತನ್ನ ಮನೆ ಮಠ ಆಸ್ತಿಯೆಲ್ಲಾ ಮಾರಿ ಊರಿನ ಎಲ್ಲಾ ಅಂಗಡಿಗಳ ವಸ್ತ್ರಗಳನ್ನು ಹೊರಿಸಿ ತಂದು ಪೇರಿಸಿದ, ತ್ರಾಸು ಕೆಳಗಿಳಿಯಲಿಲ್ಲ. ಕಡೆಗೆ ತನ್ನ ಮಗನನ್ನು ಕೂಡಿಸಿದ, ಪತ್ನಿಯನ್ನು ಕೂಡಿಸಿದ, "ಶಿವಾ ನಾವೆಲ್ಲರು ನಿನ್ನ ದಾಸರು, ಜಂಗಮನ ಕೌಪೀನ್ನ ಕೊಡಿಸಿ ನಮಗೆ ಬಂದ ಅಪವಾದವನ್ನು ಬಿಡಿಸು, ಬದಲಾಗಿ ನಮ್ಮ ಪ್ರಾಣವನ್ನೆ ತೆಗೆದುಕೊ" ಎಂದು ಹೇಳುತ್ತಾ ತಾನು ಹೋಗಿ ಕುಳಿತ. ಒಡನೆಯೆ ಕೌಪಿನ ಇದ್ದ ತ್ರಾಸು ಮೇಲಕ್ಕೇರಿತು. ತಕ್ಷಣವೆ ಮುಕ್ಕಣ್ಣ ಪ್ರತ್ಯಕ್ಷನಾದ. "ಅಮರನೀತಿ ಸತಿಸುತರೊಡನೆ ಕೈಲಾಸಕ್ಕೆ ಬಾ....ನಿನ್ನ ಭಕ್ತಿ ಮೆಚ್ಚಿ ಪುಲುಕಿತನಾಗಿದ್ದೇನೆ..." ಎಂದು ಹೇಳಿ ಅಮರನೀತಿಯನ್ನು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ಅವನಿಗೆ ಗಣಪದವಿಯನ್ನು ಇತ್ತನು.

ಒಳಗೆ ನೋಡಿದರೆ ನಮ್ಮಂಥಹ ಬಡವರ ವಸ್ತ್ರಾಪಹಾರಿ" ಎಂದು ನೂರಾರು ಜನ ಸೇರುವಂತೆ ಕೂಗಾಡಿದ.

ಅಮರನೀತಿ ಅವನನ್ನು ಬಗೆಬಗೆಯಾಗಿ ಸಂತೈಸಿದ, ಆದರೆ ಕಪಟ ಜಂಗಮ ಕೇಳುವನೆ? "ನನ್ನ ಕೌಪೀನಾ ನನ್ನ ಮುಂದಿಟ್ಟು ಮಾತಾಡಯ್ಯ... ಅದರ ಮಹಿಮೆ ನಿನಗೇನು ಗೊತ್ತು? ಇಡಿ ನಿನ್ನ ಅಂಗಡಿಯ ವಸ್ತ್ರದ ರಾಶಿಗಳನ್ನು ಪೇರಿಸಿದರು ಅದರ ತೂಕ ಬರಲಾರದು" ಎಂದು ಬೊಬ್ಬೆ ಹೊಡೆದ.

ಕೆಲವರು ಜಂಗಮನನ್ನು ಬೈದು "ಒಂದು ಕೌಪೀನಕ್ಕೆ ಹಾಗಾಡುವರೇನಯ್ಯ? ನೀನು ದೂಷಿಸುತ್ತಿರುವವನು ಪರಮ ಶಿವಭಕ್ತ. ಆತ ಮಹಾ ವಸ್ತ್ರದಾನಿ, ನಿನ್ನ ಆ ಕೌಪೀನಕ್ಕೆ ಬದಲು ಪೆಂಟಿಪೆಂಡೆ ವಸ್ತ್ರಗಳನ್ನು ಕೊಡುವೆ ಎನ್ನುತ್ತಿರುವ ಅದನ್ನು ಸ್ವೀಕರಿಸಿ ಕಲಹ ನಿಲ್ಲಿಸಿ ಹೋಗು" ಎಂದರು. ಜಂಗಮ ಅವರತ್ತ ತಿರುಗಿ

"ನನ್ನ ಕೌಪೀನಕ್ಕೆ ತಕ್ಕಷ್ಟು ವಸ್ತ್ರ ಕೊಡಲು ನಿಮ್ಮ ಈ ವಸ್ತ್ರದಾನಿಗೆ ಸಾಧ್ಯವೆ? ಹಾಗಾದರೆ ಒಂದು ಬಟ್ಟೆಯುಟ್ಟು ನಾನು ಧರಿಸಿರುವ ಈ ಕೌಪೀನ ತ್ರಾಸಿನಲ್ಲಿ ಇಡುತ್ತೇನೆ. ಇದು ಕಳೆದುಹೋದ ಕೌಪೀನದ ಜೊತೆಯದು. ಇದರ ತೂಕ ವಸ್ತ್ರ ಕೊಟ್ಟರೆ ಮರುಮಾತಾಡದೆ ಹೊರಟುಯೋಗುವೆ" ಎಂದ.

ಅದರಂತೆ ದೊಡ್ಡ ತ್ರಾಸು ತರಿಸಿ ತೂಗತೊಡಗಿದರು. ಪೆಂಟಿ ಪೆಂಟಿ ವಸ್ತ್ರಗಳ ರಾಶಿ ಹಾಕಿದರು. ಕೌಪೀನಾ ಹಾಕಿದ ತ್ರಾಸು ಕೆಳಗಿಳಿಯಲಿಲ್ಲ, ಮತ್ತು ದೊಡ್ಡ ತ್ರಾಸು ತರಿಸಿ ಅಮರನೀತಿಯ ಅಂಗಡಿಯ ವಸ್ತ್ರಗಳೆಲ್ಲಾ ತಂದು ಪೇರಿಸಿದರು.

ಅಮರನೀತಿ ತನ್ನ ಮನೆ ಮಠ ಆಸ್ತಿಯೆಲ್ಲಾ ಮಾರಿ ಊರಿನ ಎಲ್ಲಾ ಅಂಗಡಿಗಳ ವಸ್ತ್ರಗಳನ್ನು ಹೊರಸಿ ತಂದು ಪೇರಿಸಿದ, ತ್ರಾಸು ಕೆಳಗಿಳಿಯಲಿಲ್ಲ. ಕಡೆಗೆ ತನ್ನ ಮಗನನ್ನು ಕೂಡಿಸಿದ, ಪತ್ನಿಯನ್ನು ಕೂಡಿಸಿದ, "ಶಿವಾ ನಾವೆಲ್ಲರು ನಿನ್ನ ದಾಸರು, ಜಂಗಮನ ಕೌಪೀನ ಕೊಡಿಸಿ ನಮಗೆ ಬಂದ ಅಪವಾದವನ್ನು ಬಿಡಿಸು, ಬದಲಾಗಿ ನಮ್ಮ ಪ್ರಾಣವನ್ನೆ ತೆಗೆದುಕೊ" ಎಂದು ಹೇಳುತ್ತಾ ತಾನು ಹೋಗಿ ಕುಳಿತ. ಒಡನೆಯೆ ಕೌಪಿನ ಇದ್ದ ತ್ರಾಸು ಮೇಲಕ್ಕೇರಿತು. ತಕ್ಷಣವೆ ಮುಕ್ಕಣ್ಣ ಪ್ರತ್ಯಕ್ಷನಾದ. "ಅಮರನೀತಿ ಸತಿಸುತರೊಡನೆ ಕೈಲಾಸಕ್ಕೆ ಬಾ.... ನಿನ್ನ ಭಕ್ತಿ ಮೆಚ್ಚಿ ಪುಲುಕಿತನಾಗಿದ್ದೇನೆ..." ಎಂದು ಹೇಳಿ ಅಮರನೀತಿಯನ್ನು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ಅವನಿಗೆ ಗಣಪದವಿಯನ್ನು ಇತ್ತನು. ●

# ತಾಯ ಋಣಾನುಬಂಧ ಮತ್ತು ಸಂಸ್ಕಾರಗಳು

—ಪ್ರೊ. ವಸಂತಕುಷ್ಟಗಿ

ಪ್ರಾಂಶುಪಾಲರು, ಎಂ. ಎಸ್. ಆರ್ಯ ಡಿಗ್ರಿ ಕಾಲೇಜು, ಕಲಬುರಗಿ–585102.

ಈ ಭೂಮಿಯಮೇಲೆ ಹುಟ್ಟಿಬಂದವರಿಗೆಲ್ಲ ಪಂಚಭೂತಗಳ ಋಣಾನುಬಂಧವು ಅಪಾರವಾಗಿರುತ್ತದೆ. ತೀರದ ಲೆಕ್ಕವಾಗಿರುತ್ತದೆ. ಈ ಲೆಕ್ಕಪತ್ರದಲ್ಲಿ ಧರ್ಮ ಸಂಸ್ಕೃತಿಗಳ ತಂತುತಂತುಗಳು ಇಡೀ ವಿಶ್ವವನ್ನೇ ಬಂಧಿಸಿಟ್ಟಿರುತ್ತವೆ. ಅದಕ್ಕಾಗಿ, ಈ ಭೂಮಿಯ ಮೇಲೆ ಹುಟ್ಟಿಬಂದ ಕ್ಷಣದಿಂದ ಬಹಳಷ್ಟು ವಿಧಗಳಿಂದ ನಿಸರ್ಗದ ಕರುಣಾ ಕೃತಜ್ಞತೆಯಲ್ಲಿ ಮನುಷ್ಯ ಪ್ರಾಣಿಯಂತೂ ಇರಲೇಬೇಕಾಗುತ್ತದೆ. ಅದಕ್ಕಾಗಿ ಈ ಅವಕಾಶವನ್ನು ಒದಗಿಸಿಕೊಟ್ಟ ತಮ್ಮ ಹಡೆದವ್ವನ ಋಣವನ್ನು ಸದಾ ನೆನೆಯಲೇಬೇಕು. ಈ ಹಡೆದವ್ವನಂತೆ, ಈ ನೆಲದ ನುಡಿಯ ತಾಯಿಯೂ ನಮಗೆ ಋಣವನ್ನು ನೀಡಿದ್ದಾಳೆಂಬುದನ್ನು ನಾವು ಎಂದೆಂದಿಗೂ ಮರೆಯುವಂತಿಲ್ಲ. ಏಕೆಂದರೆ ನುಡಿದಾಯಿಯು ಸಂಪರ್ಕ ಮಾಧ್ಯಮದ ಉಸಿರು. ಸಹಜೀವನ ಸೌಂದರ್ಯದ ನಾಡಿ. ಅಂತೆಯೇ ಆಧುನಿಕ ಕಣ್ವರಾದ ಆಚಾರ್ಯ ಬಿ. ಎಂ. ಶ್ರೀ ಅವರು,

"ಮೊದಲ ತಾಯ ಹಾಲ ಕುಡಿದು
ಲಲ್ಲೆಯಿಂದ ತೊದಲ ನುಡಿದು
ಕೆಳೆಯರೊಡನೆ ಬೆಳೆದ ಮಾತದಾವುದು ?
ನಲ್ಲೆಯೊಲವ ತೆರೆದು ತಂದ ಮಾತದಾವುದು ?

ಎಂದು ತಾಯಿನುಡಿಯ ಮಹತ್ವವನ್ನು ಎತ್ತಿ ಹಾಡಿದ್ದಾರೆ. ಆನಂದಕಂದರಾದರೋ

"ಎನಿತು ಇನಿದು ಕನ್ನಡ ನುಡಿಯು
ಮನವನು ತಣಿಸುವ ಮೋಹನ ಸುಧೆಯು"

ಎಂದು ಔಚಿತ್ಯಪೂರ್ಣವಾಗಿ ಹೇಳಿದ್ದಾರೆ. ಜಿ. ಪಿ. ರಾಜರತ್ನಂರಿಗೆ ಯೆಂಡ ಹೆಣ್ತಿಗಳ ಜೊತೆಗೆ ಅಷ್ಟೇ ಪಂಚಪ್ರಾಣ ಕನ್ನಡ ಪದಗೋಳ್. ಅಂತೆಯೇ ಅವರಿಗೆ ಯಾರಾದರೂ ಕನ್ನಡ ಪದಗಳನ್ನು ಬಿಟ್ಟುಬಿಡು ಎಂದು ಹೇಳಿದ್ದಾದರೆ, ಹಾಗೆಂದು ಹೇಳಿದವನು "ದೇವ್ರು ಆದರೇನ್ ಮಾಡ್ತೀನಿ ಔನ್ ಖತ್ನ" ಎಂದು ಮಾಡಿದ ಅವರ ಪ್ರತಿಜ್ಞೆಯು ಇನ್ನೂ ಜೀವಂತ. ಬೆನಗಲ್ ರಾಮರಾಯರು "ಕನ್ನಡವನುಳಿದೆನಗೆ

ಅನ್ಯ ಜೀವನವಿಲ್ಲ; ಕನ್ನಡವೇ ಎನ್ನುಸಿರು; ಪೆತ್ತೆನ್ನ ತಾಯಿ!" ಎನ್ನುತ್ತಾರೆ. ಇಂತಹ ಕನ್ನಡವು ರಸಸರಸ್ವತಿಯ ನವ ಕಲ್ಪಕತೆಯನ್ನು ಸೂಸುವ ವೀಣಾಳವ. ನೇವುರಕ್ವಣಿತ ರಂಗನ ಮುರಲಿಯ ಸ್ವರ. ಬೆಳಗಿನ ಜಾವದ ಹಕ್ಕಿಪಕ್ಕಿಗಳ ಚಿಲಿಪಿಲಿಯ ಚೈತನ್ಯ ಸ್ಪಂದನದ ಉಲಿ. ಅಬ್ಬಾ! ಎಂತಹ ರುಚಿ ಕನ್ನಡಕ್ಕೆ! ಅಳಿಯೆರಗದ ಅನಿಲವಲಗದ ಮೀಸಲು ಭಾವ ಅದಕ್ಕೆ.

ಇಂತಹ ಸವಿನುಡಿಯನ್ನು ಹೊಂದಿದ ಕನ್ನಡನಾಡಿನ ನೆಬವು ಚಾಗದ ಭೋಗದಕ್ಕರದ ಗೇಯದಲಂಪಿನಿಂಪುಗಳ್ಗಾಗರ. ಪತ್ರಪುಷ್ಪ ಕಾಯಿಹಣ್ಣುಗಳಿಂದ ತುಂಬಿ ತುಳುಕುವ ಸಮೃದ್ಧಿ ನೆಲ. ಚಾಳುಕ್ಯ–ರಾಷ್ಟ್ರಕೂಟರು, ಗಂಗರು, ಕದಂಬರು, ಹೊಯ್ಸಳರು ರಾಜ ಧರ್ಮವನ್ನು ಮೆರೆದು ಪ್ರಜಾ ರಕ್ಷಣೆಯನ್ನು ಮಾಡಿದ ವೀರಯೋಗ ಭೂಮಿ. ಪಂಪ, ರನ್ನ, ಬಸವ, ಹರಿಹರ, ಜನ್ನ, ನಾರಾಣಪ್ಪ, ಪುರಂದರದಾಸ, ಲಕ್ಷ್ಮೀಶ, ವಿಜಯದಾಸ, ಷಡಕ್ಷರಿ, ಮುದ್ದಣರಂತಹ ಕವಿಗಳನ್ನು ಪಡೆದ ಕಾವ್ಯಯೋಗದ ಚಿನ್ನದ ಗಣಿ. ಶಿಲ್ಪಕಲೆ, ಸಂಗೀತ, ಚಿತ್ರ ಇತ್ಯಾದಿ ಲಲಿತ ಕಲೆಗಳಿಗೆ ಆಗರ.

ಇಂಥ ನಾಡಿನಲ್ಲಿ ವಾಸಿಸುವ ಜನರು ಪದನರಿದು ನುಡಿಯುವ ಜಾಣರಷ್ಟೇ ಅಲ್ಲ, ತಾಯಿಯ ಎದೆಹಾಲನ್ನು ಕುಡಿಯುವಾಗ,

"ಕೆರೆಯುಂ ಕಟ್ಟಿಸು, ಬಾವಿಯುಂ ಸವೆಸು, ದೇವಾಗಾರಮಂ
ಮಾಡಿಸಜ್ಜರೆಯೊಳ್ ಸಿಲ್ಕದನಾಥರಂ ಬಿಡಿಸು, ಮಿತ್ರರ್ಗಿಂಬುಗೆಯ್
ನಂಬಿದರ್ಗೆರವಟ್ಟಾಗಿರು ಶಿಷ್ಟರಂ ಪೊರೆ....."

ಎಂಬಂತಹ ಮಾತುಗಳನ್ನು ಕೇಳಿ ಬೆಳೆದವರು. ಅದರಂತೆ ಇಂದಿಗೂ ಸಹ ಜೀವನವನ್ನು ನಡೆಸುತ್ತ ವ್ಯಾಖ್ಯಾನವಾದವರು ದೃಷ್ಟಾಂತವಾದವರು.

ಹೀಗೆ ಸಹಜೀವನಕ್ಕೆ ಹೆಸರುವಾಸಿಯಾದ ಕನ್ನಡನಾಡು ಮತಸಹಿಷ್ಣುತೆಗೆ ಹೆಸರುವಾಸಿಯೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಏಕೆಂದರೆ ಕನ್ನಡ ನಾಡಿನಲ್ಲಿ ಹನುಮನ ಕಾಲದಿಂದಲೂ ಅನೇಕ ಮತ ವಿಚಾರಗಳು ನೆಲುವು ಪಡೆದಿವೆ. ನಲುಗೆ ಪಡೆದಿವೆ, ಸಲುಗೆ ಪಡೆದು ಬಾಳಿವೆ. ಈ ಮಾತಿಗೆ ಸಾಕ್ಷಿಯಾಗಿ ಸಾಕಷ್ಟು ನಿದರ್ಶನಗಳನ್ನು ಹೆಸರಿಸಬಹುದು.

ಕದಂಬರು ವೈದಿಕ ಧರ್ಮಾನುಯಾಯಿಗಳು, ಆದರೆ ಈ ವಂಶದ ಮೃಗೇಶವರ್ಮ ಜೈನ ಧರ್ಮಕ್ಕೆ ಸಹಾಯ ಮಾಡಿದನು.



ರಾಷ್ಟ್ರಕೂಟರ ಮೊದಲನೆಯ ಅಮೋಘವರ್ಷ ಜೈನಧರ್ಮಿ. ಆದರೆ ವೈದಿಕರ ಆರಾಧ್ಯ ದೇವತೆ ಲಕ್ಷ್ಮೀದೇವಿಯ ಭಕ್ತ.

ಬೇಲೂರಿನ ಶಾಸನದಲ್ಲಿ ಜಗತ್ತಿಗೆಲ್ಲ ಒಬ್ಬನೇ ಆಗಿರುವ ದೇವರನ್ನು ಬೇರೆಬೇರೆ ಹೆಸರುಗಳಿಂದ ಕರೆದ ಸ್ಪಷ್ಟ ಉಲ್ಲೇಖಗಳಿವೆ.

ಹರಿಹರದಲ್ಲಿರುವ ಹರೀಶ್ವರ ದೇವಾಲಯವು ಹರಿಹರರಲ್ಲಿಯ ಭೇದವನ್ನು ತೊಡೆದು ಹಾಕಲು ಮಾಡಿದ ಪ್ರಯತ್ನದ ಹೆಗ್ಗುರುತು.

ಕ್ರಿ.ಶ. ೧೩೬೮ ರಲ್ಲಿ ವಿಜಯನಗರದ ಮೊದಲನೆಯ ವೀರಬುಕ್ಕರಾಯನು ಸ್ವತಃ ವೈದಿಕ ಧರ್ಮದವನಿದ್ದರೂ ಅಲ್ಪ ಸಂಖ್ಯಾತರ ಪಕ್ಷವಹಿಸಿ ಎಲ್ಲ ಧರ್ಮದವರೂ ಕೂಡಿಕೊಂಡಿರಬೇಕೆಂದು ಬರೆಸಿದ ಮಾರ್ಗದೀಪ್ತಿ ಶಾಸನವು ಅಪರೂಪ ರಾಜಧರ್ಮವನ್ನು ಮೆರೆದಿದೆ.

ಕ್ರಿ. ಶ. ೧೩೪೭ರಲ್ಲಿ ಹಳೇಬೀಡಿನ ಒಂದು ಶಾಸನದಲ್ಲಿ ಜೈನ ಧರ್ಮಕ್ಕುಂಟಾದ ವಿಘ್ನವು ಶಿವಧರ್ಮಕ್ಕೆ ಉಂಟಾದ ವಿಘ್ನವೆಂದು ನಿಚ್ಚಳವಾಗಿ ಬಿಂಬಿತವಾಗಿದೆ.

ವಿಜಯನಗರದ ದೊರೆಗಳು ಮುಸಲ್ಮಾನ ಪ್ರಜೆಗಳ ಗೌರವ ನಿಮಿತ್ತವಾಗಿ ಶ್ರೀ ಖುರಾನಷರೀಫನ್ನು ತಮ್ಮ ಸಿಂಹಾಸನದ ಪಕ್ಕದಲ್ಲಿಟ್ಟು ಗೌರವಿಸುತ್ತಿದ್ದುದು ಇನ್ನೂ ನೆನಪಿನಲ್ಲಿ ಹಸಿರಾಗಿದೆ.

ಕ್ರಿ. ಶ. ೧೩೪೭ ರಲ್ಲಿ ಹಸನ್ ಜಾಫರ್‌ಖಾನ ಬ್ರಾಹ್ಮಣ ರಾಜ್ಯವನ್ನು ಕಲಬುರಗಿಯಲ್ಲಿ ಸ್ಥಾಪಿಸಿದನು. ಬ್ರಾಹ್ಮಣ ಹೆಸರಿನಲ್ಲಿ ತನ್ನ ಒಡೆಯ ಗಂಗೂ ಬ್ರಾಹ್ಮಣನಿಗೆ ತೋರಿದ ಅಭಿಮಾನಾದರಗಳೇ ಅಭಿವ್ಯಕ್ತಗೊಂಡಿವೆ.

ಶಿಶುನಾಳ ಶರೀಫರಂತೂ ಹಿಂದೂ ಮುಸ್ಲಿಂ ಐಕ್ಯನನ್ನು ಸ್ಥಾಪಿಸಿದ ನಮ್ಮ ಸಂತ ಕವಿ ಕಬೀರನಿಗೆ ಸಾಟಿ.

ಕಿಟೆಲ್, ರಾಯಿಸ್ ಮೊದಲಾದ ಕ್ರೈಸ್ತ ಬಂಧುಗಳೂ ನಮ್ಮವರೇ, ನಮ್ಮ ನಾಡು ನುಡಿಯ ಹೆಮ್ಮೆಯ ಮಕ್ಕಳು. ಅವರು ಕನ್ನಡಕ್ಕೆ ಮಾಡಿದ ಸೇವೆ, ಕ್ರೈಸ್ತ ಧರ್ಮದ ಔದಾರ್ಯದ ಪ್ರತೀಕ——

—ಇಂತಹ ನಿದರ್ಶನಗಳ ಹಿನ್ನೆಲೆಯಲ್ಲಿ ಕನ್ನಡ ನಾಡು ಎಂದಿನಿಂದಲೂ ಮತಸಹಿಷ್ಣುತೆಗೆ, ಸೌಜನ್ಯದ ಸಾಕಾರತೆಗೆ, ಔದಾರ್ಯದ ಕಡಲಿನಂತರಾಳವನ್ನು ತಲುಪುವುದಕ್ಕೆ ಹೇಳಿ ಮಾಡಿಸಿದ ಪ್ರದೇಶ.

ಇಂದಿನ ವಿಜ್ಞಾನದಿಂದ ಸಂಕುಚಿತ ಗೊಂಡ ಪ್ರಪಂಚದ ಪೆಟಿಜಲ್ಲಂತೂ ಭಾರತಾಂತರಗತ ಕರ್ನಾಟಕ ಸಂಸ್ಕೃತಿಯ ಪ್ರಮುಖ ಲಕ್ಷಣಗಳಾದ ಸಹಿಷ್ಣುತೆ, ಸಹೃದಯತೆಗಳೆಂಬ ಗುಣಗಣಿಗಾಗಿ, ಭಾರತಕ್ಕೆ ನೀಲ ಗಂಗೆಯ ಸ್ಥಾನ. ಮಾನವ ಜನುಮ ದೊಡ್ಡದೆಂದು ಸಾಧಿಸಿ ಪ್ರಸಾರ ಮಾಡಿದುದಕ್ಕೆ ರಸಚೇತನನಾದ ಗೌರೀಶಂಕರದ ತುದಿ. ಈಸಬೇಕು; ಇದ್ದು ಜೈಸಬೇಕು—ಎಂಬ ಉಕ್ತಿಯ ಸಾಧ್ಯತೆಗಾಗಿ ಕ್ಷೀರ ಸಮುದ್ರ. ಇಂಥ ಪರಿಸರದಲ್ಲಿ ಉಸಿರಾಡುವ ಗಾಳಿಯಲ್ಲಿ

"ಏಕಂ ಸತ್ ವಿಪ್ರಾಬಹುದಾವದಂತಿ"
"ದೇವನೊಬ್ಬ ನಾಮಹಲವು"........

—ಎಂಬ ಸೊಲ್ಲೇ ಕೇಳುತ್ತದೆ. ಈ ಸೊಲ್ಲನ್ನು ಇಂದಿಗೂ ಜ್ಯೋತಿರ್ಲಿಂಗವಾಗಿಟ್ಟು ಕೊಂಡು ಬಂದಿರುವ ಕನ್ನಡಿಗರನ್ನು ಹೊಂದಿರುವ ಭಾರತೀಯರೆಲ್ಲ ವಿಶ್ವದ ಹೆಮ್ಮೆಯ ಮಕ್ಕಳು. ಸದಾ ಹಡೆದವ್ವನ ಋಣವನ್ನು ನೆನೆಯುತ್ತ, ನೆನಹಿನ ಹಾಡು ಹಾಡುವ ನುಡಿದಾಯಿಯ ಋಣವನ್ನು ಹಾಡು ಹಾಡಿ ನೆಲೆಯಾಗಿ ನಿಲ್ಲುವಂತೆ ಮಾಡಿರುವ ನೆಲದಾಯಿಯ ಋಣವನ್ನು-ಸದಾಸ್ಮರಣೆಯಲ್ಲಿ ಇಟ್ಟುಕೊಂಡ ಕನ್ನಡ ಭಾರತೀಯರಾದ ನಮ್ಮ ತಾಯಿಗೆ ತಕ್ಕ ಮಕ್ಕಳು. !

"ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು"
"ಜಯಹೇ ಕರ್ನಾಟಕ ಮಾತೆ ಭಾರತ ಜನನಿಯ ತನುಜಾತೆ"





# ಶರಣರು ಮೆಟ್ಟಿದ ಧರೆ-೩ [ಮುಂದುವರಿದ ಲೇಖನ]
## ಅಥಣಿ ಶಿವಯೋಗಿಗಳು

—ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ

### ಗುಹೇಶ್ವರ ಗಡ್ಡೆಯಲ್ಲಿ ತಪಶ್ಚರ್ಯೆ ಕಾಳಸರ್ಪ ಸುಳಿದಾಟ:-

ಹೀಗೆ ಶಿವಯೋಗಿಗಳು ಪಟ್ಟಣದಲ್ಲಿ ಐದು ರಾತ್ರಿಗಳನ್ನು ಕಳೆಯುತ್ತ, ಹಳ್ಳಿಯಲ್ಲಿ ಒಂದೇ ರಾತ್ರಿಯನ್ನು ಕಳೆಯುತ್ತ ಸುಮಾರು ಇಪ್ಪತ್ತು ವರ್ಷಗಳವರೆಗೆ ಸಂಚರಿಸಿ ತೀರ್ಥಕ್ಷೇತ್ರಗಳನ್ನು ತಮ್ಮ ಪಾದ ಸ್ಪರ್ಶದಿಂದ ಪುನೀತಗೊಳಿಸುತ್ತ ವಿಶ್ರಾಂತಿಗೋಸ್ಕರವಾಗಿ ವಿಶಾಲವಾದ ಗುಹೇಶ್ವರಗಡ್ಡೆ ಎಂಬ ಪರಮ ಪುಣ್ಯ ತಪೋವನಕ್ಕೆ ಬಂದು ತಂಗಿದರು. ಈ ಸಮಯದಲ್ಲಿ ಶ್ರೀಗಳಿಗೆ ನಲವತ್ತು ವರ್ಷಗಳಾಗಿದ್ದವು. ಶಿವಯೋಗಿಗಳು ಬಹು ರಮ್ಯವಾಗಿದ್ದ ಏಕಾಂತಸ್ಥಲದ ಗಡ್ಡೆಯಲ್ಲಿ ಕುಳಿತು ಲಿಂಗಯೋಗವನ್ನು ಆಚರಿಸುತ್ತಲಿದ್ದರು.

ಶಿವಯೋಗಿಗಳು ತಪಃಶಕ್ತಿ ಸಾಮ್ರಾಜ್ಯದಲ್ಲಿ ನಲಿದು ಶಿವಾನಂದ ಸಮುದ್ರದಲ್ಲಿ ಮುಳುಗೇಳ್ದು ಅನುಪಮ ಅಖಂಡ ತೇಜೋಮೂರ್ತಿಯಾಗಿ ಬೆಳಗಿದರು. ಹೀಗೆ ಶ್ರೀಗಳು ಪರಶಿವನಂತೆ ಪ್ರಕಾಶಿಸುತ್ತ ಶಿವಾರ್ಚನಾ ನಂತರ ಐದು ಬಿಲ್ವದಳಗಳನ್ನು ಸೇವಿಸುತ್ತ ಕೆಲಕಾಲವನ್ನು ಕಳೆಯುತ್ತಿರಲು, ಸಂದರ್ಶನಕ್ಕೆಂದು ನೆರೆಹಳ್ಳಿಯ ಭಕ್ತಜನರು ಬರಲಾರಂಭಿಸಿದರು. ಪ್ರತಿದಿನವೂ ಶಿವಯೋಗಿಗಳು ಶಿವಧ್ಯಾನದಲ್ಲಿ ಸಮಾಧಿಸ್ಥರಾಗಿದ್ದ ಸಮಯದಲ್ಲಿ ಘೋರವಾದ ಕಾಲಸರ್ಪವು ಹೆಡೆಯನ್ನಲ್ಲಾಡಿಸುತ್ತ ಅವರ ಎದುರಿನಲ್ಲಿ ಆಡುತ್ತಿತ್ತು. ದರ್ಶನಾಕಾಂಕ್ಷಿಗಳಾಗಿ ಬಂದ ಜನರು ನೋಡಿ, ಕೋಲಾಹಲವನ್ನು ಮಾಡಲಾಗಿ ಸರ್ಪವು ಭುಸ್ಸೆಂದು ಜನರ ಕಡೆಗೆ ಹೊರಟಿತು. ಆಗ ಭಯಂಕರವಾದ ಸರ್ಪದ ಫೂತ್ಕಾರವನ್ನು ಕಂಡು ಜನರು ಹೆದರಿ ಓಡಲಾರಂಭಿಸಿದರು. ಆಗ ಶಿವಯೋಗಿಗಳು ಸಮಾಧಿಯಿಂದೆಚ್ಚತ್ತು ಬಹಿರ್ಮುಖವಾಗಿ ಕಣ್ದೆರೆದು ಓಡಾಡುತ್ತಿರುವ ಜನತೆಯನ್ನು ನೋಡಿ ಕಾಲಸರ್ಪನಿಗೆ ಮತ್ತೆ ಆ ಸ್ಥಲಕ್ಕೆ ಬಾರದಂತೆ ಆಜ್ಞಾಪಿಸಿದರು. ಅಂದಿನಿಂದ ಆ ಕಾಲಸರ್ಪವೂ ಅಲ್ಲಿಗೆ ಮರಳಿ ಬರಲೇ ಇಲ್ಲ. ಇದುವೇ ಶಿವಯೋಗದ ಶಕ್ತಿಸಾಮರ್ಥ್ಯವೆನ್ನಬಹುದು.

### ವ್ಯಾಘ್ರ ನಿರೋಧನ-ಅಡವಿ ಸ್ವಾಮಿಗಳಿಗೆ ಅನುಭಾವ ಧರ್ಮಬೋಧನೆ:-

ಶಿವಯೋಗಿಗಳು ಗುಹೇಶ್ವರಗಡ್ಡೆಯಿಂದ ಮರಳಿ ಬರುವಾಗ ಮಾರ್ಗದಲ್ಲಿ ಒಬ್ಬ ವೃದ್ಧ ಜಂಗಮರು ಬಂದು ಶಿವಯೋಗಿಗಳನ್ನು ಕಂಡು, 'ನೀವು ಅಂಕಲಗಿ ಅಡವಿ

ಸ್ವಾಮಿಗಳ ದರ್ಶನ ಪಡೆಯಬೇಕು' ಎಂದು ಹೇಳಿ ಅಲ್ಲಿಯೇ ಅದೃಶ್ಯರಾದರು. ಶಿವಯೋಗಿಗಳು ಅಂಕಲಗಿ ಅಡವಿ ಸ್ವಾಮಿಗಳ ದರ್ಶನಕ್ಕೆಂದು ಹಾಗೆಯೇ ಅರಣ್ಯ ಮಾರ್ಗವಾಗಿ ಮುಂದೆ ಸಾಗಿರಲು ಒಮ್ಮೆಲೇ ಕ್ರೂರ ಮೃಗಗಳ ಘೋರ ಗರ್ಜನೆ ಕೇಳತೊಡಗಿತು. ಆಗ ಶಿವಯೋಗಿಗಳು ಮೆಲ್ಲಮೆಲ್ಲನೆ ಬರುತ್ತಿರುವಷ್ಟರಲ್ಲಿಯೇ ಗುಡ್ಡದ ಓರೆಯೊಳಗಿಂದ ಒಂದು ಹೆಬ್ಬುಲಿಯು ಆರ್ಭಟಿಸುತ್ತ ಒಮ್ಮಿಂದೊಮ್ಮೆಲೇ ಹಾರಿ ಬಂದು ಎದುರಿನಲ್ಲಿ ಬಾಯಿತೆರೆದು ನಿಂತುಬಿಟ್ಟಿತು. ಶಿವಯೋಗಿಗಳು ತಮ್ಮ ಹತ್ತಿರವಿದ್ದ ಖರ್ಜೂರ ಫಲವನ್ನು ಅದರ ಮುಂದೆ ಚೆಲ್ಲಿದರು. ಆಗ ಹುಲಿಯು ಅದನ್ನು ಮೂಸಿನೋಡಿ ಮೆತ್ತಗಾಗಿ ನಿಂತಲ್ಲಿಯೇ ನಿಂತಿತು. ಚಿತ್ರದಲ್ಲಿನ ಬೊಂಬೆಯಂತೆ ಅಲುಗಾಡಲಿಕ್ಕೂ ಸಹ ಬರಲಿಲ್ಲ. ಆ ಬಳಿಕ ಕರುಣಾಮೂರ್ತಿಗಳಾದ ಶಿವಯೋಗಿಗಳು ಕನಿಕರದಿಂದ ಅದಕ್ಕೆ ಮತ್ತೆ ಚೈತನ್ಯವಿತ್ತು ಮುಂದೆ ಸಾಗಿದರು. ಹಾಗೆಯೇ ಆ ಮಾರ್ಗವನ್ನು ತೊರೆದು ಬೇರೊಂದು ದಾರಿಯಿಂದ ಹೊರಟು ಮಧ್ಯದಲ್ಲಿ ಹಸುಗಳನ್ನು ಮೇಯಿಸುವ ಮಕ್ಕಳನ್ನು ಕೇಳುತ್ತ ಶಿವಯೋಗಿಗಳು ಅಂಕಲಗಿ ಅಡವಿ ಸ್ವಾಮಿಗಳ ಮಠದ ಮುಂಭಾಗಕ್ಕೆ ಬಂದರು.

ಸಿದ್ಧಪುರುಷರೂ ಜ್ಞಾನವೃದ್ಧರೂ ಆಗಿದ್ದ ಅಡವಿ ಸ್ವಾಮಿಗಳು ತಮ್ಮ ಜ್ಞಾನದೃಷ್ಟಿಯ ಬಲದಿಂದ ಶಿವಯೋಗಿಗಳ ಆಗಮನವನ್ನು ಈ ಮೊದಲೇ ತಿಳಿದುಕೊಂಡಿದ್ದರಿಂದ ಶಿವಯೋಗಿಗಳು ಮಠದ ಮಹಾದ್ವಾರಕ್ಕೆ ಬರುವ ಪೂರ್ವದಲ್ಲಿಯೇ ಅವರನ್ನು ಒಳಗೆ ಬರಮಾಡಿಕೊಳ್ಳುವುದಕ್ಕೋಸ್ಕರ ಬಾಗಿಲ ಬಳಿ ಬಂದು ನಿರೀಕ್ಷಿಸುತ್ತ ನಿಂತಿದ್ದರು. ಗಂಗಾ, ಯಮುನಾ ನದಿಗಳ ಸಂಗಮವಾದಂತೆ ಉಭಯ ಶ್ರೀಗಳು ಸೇರಿದೊಡನೆ ಪರಸ್ಪರ ಪ್ರಣಾಮಗಳನ್ನು ಸಲ್ಲಿಸಿದ ಮೇಲೆ ಒಬ್ಬರಿಗೊಬ್ಬರು ಸುಖಾಗಮನ ಸಂತಸದ ನುಡಿಗಳನ್ನು ವಿಚಾರಿಸುತ್ತ ಶಿವಪೂಜಾದಿಗಳನ್ನು ತೀರಿಸಿ ಪ್ರಸಾದ ತೃಪ್ತಿ ಹೊಂದಿದರು. ಬಳಿಕ ಅಂಕಲಗಿ ಅಡವಿ ಸ್ವಾಮಿಗಳು ಶಿವಯೋಗಿಗಳಿಗೆ ಶಿವಾನುಭವ ತತ್ತ್ವಸಾರವನ್ನು ಬೋಧಿಸಬೇಕೆಂದು ಕೇಳಿಕೊಂಡರು. ಅದಕ್ಕೆ ಶಿವಯೋಗಿಗಳು ಎಲೈ ಮಹಾನುಭಾವರೆ, ದಿವ್ಯ ಜ್ಞಾನಿಗಳೂ ತಪಃಸಿದ್ಧರೂ ಆದ ತಮಗೆ ನಾನು ಬೋಧಿಸಬೇಕೆ? ಎನಲು, ಸುಜ್ಞಾನ ವಿಚಾರಕ್ಕೆ ಎಂದಿಗೂ ತೃಪ್ತಿ ಎಂಬುದೇ ಇಲ್ಲವಾದುದರಿಂದ ಈ ಶಿವಾನುಭವ ಧರ್ಮಸಾರವನ್ನು ನನಗೆ ಚೆನ್ನಾಗಿ ಬೋಧಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದೇ ಅಡವಿ ಸ್ವಾಮಿಗಳು ಮತ್ತೆ ಪ್ರಾರ್ಥಿಸಲು, ಆಗಲಿ ಎಂದು ಶಿವಯೋಗಿಗಳು ಶಿವಾನುಭವಗೋಷ್ಠಿಯನ್ನು ಪ್ರಾರಂಭಿಸಿ–

ನ ಕರ್ಮಣಾ ನ ಪ್ರಜಯಾ ನ ಧನೇನ ತ್ಯಾಗೇನ।
ಜ್ಞಾನೇ ನೈಕೇನಾಮೃತತ್ವಮಾನಶುಃ॥

ಎಂಬ ಶ್ರುತಿವಾಕ್ಯದಂತೆ ಕೇವಲ ಕರ್ಮಮಾರ್ಗದಿಂದಲೂ, ದಾನಧರ್ಮದಿಂದಲೂ, ಧನಸಂಪತ್ತಿನಿಂದಲೂ ಪುಣ್ಯಲೋಕ ಪ್ರಾಪ್ತಿಯಾಗುವುದಲ್ಲದೆ ಲಿಂಗಾಂಗ ಸಾಮರಸ್ಯ



ರೂಪಿ ಮೋಕ್ಷವಾಗುವುದಿಲ್ಲ. ಈ ಲಿಂಗಾಂಗ ಸಮರಸ ಜ್ಞಾನ ಒಂದರಿಂದಲೇ ನಿಜವಾದ ಮೋಕ್ಷವನ್ನು ಪಡೆಯುವರು. ಎಂದು ಮುಂತಾಗಿ ಶರಣರ ತಿಳಿಯಾದ ಬಾಳಿನ ತಿರುಳಾದ ಶಿವಾನುಭವ ರಹಸ್ಯವನ್ನು ಬೋಧಿಸಿ ಮರಳಿ ಅಥಣಿಗೆ ಬಂದರು.

## ಅಧಿಕಾರ ನಿರಸನ

ಶಿವಯೋಗಿಗಳು ಮರಳಿ ಅಥಣಿಗೆ ಬಂದಾಗ ಮಧ್ಯಕಾಲದ ಅವಧಿಯಲ್ಲಿ ಮೊದಲನೆಯ ಗುರುಗಳಾದ ಮರುಳು ಶಂಕರ ಸ್ವಾಮಿಗಳೂ, ಎರಡನೆಯ ಗುರುಗಳಾದ ಗುರುಶಾಂತ ಸ್ವಾಮಿಗಳೂ ಲಿಂಗೈಕ್ಯರಾಗಿದ್ದರು. ಮೂರನೆಯವರಾದ ಚೆನ್ನಬಸವ ಸ್ವಾಮಿಗಳು ಅಧಿಕಾರ ವಹಿಸಿದ್ದರು. ಇವರು ಶಿವಯೋಗಿಗಳನ್ನು ಒಳ್ಳೇ ಆದರದಿಂದ ಬರಮಾಡಿಕೊಂಡು ಎಲ್ಲ ಸಂಗತಿಗಳನ್ನು ಅವರಿಗೆ ತಿಳಿಸಿದರು. ಚೆನ್ನಬಸವ ಸ್ವಾಮಿಗಳು ಶಿವಯೋಗಿಗಳನ್ನು ಕರೆದು ಯತಿಕುಲ ತಿಲಕನೇ ವಯೋವೃದ್ಧರಾದ ನಾವು ಇನ್ನುಮೇಲೆ ಇಹಲೋಕ ಯಾತ್ರೆಯನ್ನು ಮುಗಿಸಬೇಕಾಗಿದೆ. ಈ ಮಠದ ಸರ್ವಾಧಿಕಾರವನ್ನು ನೀವೆ ವಹಿಸಬೇಕು. ಅಂದರೆ ಜನತೆಗೆ ಇದು ತುಂಬ ಮೆಚ್ಚುಗೆಯಾಗಿ ಮಠವು ವೃದ್ಧಿಗೆ ಬರಲು ಕಾರಣವಾಗುವುದು–ಎಂದು ಅಪ್ಪಣೆ ಮಾಡಿದರು. ಶಿವಯೋಗಿಗಳು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಮೇಲಕ್ಕೆದ್ದು ನಿಂತು ಕೈಗಳನ್ನು ಜೋಡಿಸಿ ಭಕ್ತಿ ವಿನಯಗಳಿಂದ ಗುರುವರ್ಯರೆ, ಈ ಘಟವೂ, ಮಠವೂ, ಲಾಭವು, ಲೋಭವೂ, ಅಧಿಕಾರವೂ ಯಾವುದೊಂದು ನನಗೆ ಬೇಕಾಗಿಲ್ಲ. ಆಶೆಯ ಮೂಲವಾದ ಇವುಗಳನ್ನು ನಾನು ಸ್ವಪ್ನದಲ್ಲಿಯೂ ಕೂಡ ಅಪೇಕ್ಷಿಸಲಾರೆ. ಸ್ವಾಮೀ 'ಆಶೆಯೇ ದುಃಖದ ಮೂಲವು' ಎಂಬುದನ್ನು ತಿಳಿದಮೇಲೆ ಈ ಅಧಿಕಾರ ಬಂಧನವೇನಗೆ ಬೇಡ. ನನಗೆ ಬೇಕಾದುದು ನಿತ್ಯ ಸುಖವನ್ನೀಯುವ ಶಿವಯೋಗಾನಂದ ಒಂದೇ ಒಂದು ಮಾತ್ರ; ಗುರುಗಳೇ, ಅದನ್ನೇ ಅನುಗ್ರಹಿಸಿ ನನ್ನನ್ನು ರಕ್ಷಿಸಬೇಕು.

ಈ ಮಠಾಧಿಕಾರಕ್ಕೆ ಒಳ್ಳೇ ಕುಶಲರೂ ಭಕ್ತಿವಂತರೂ ಪರಮಾರ್ಥ ಜ್ಞಾನ ಸಂಪನ್ನರೂ ಆದ ಸಿದ್ಧಲಿಂಗದೇವರು ಒಳ್ಳೇ ಸಮರ್ಥರಾಗಿದ್ದಾರೆ ಎಂದು ಹೇಳಿ, ದೈನ್ಯದಿಂದ ಶಿವಯೋಗಿಗಳು ಗುರುಗಳಲ್ಲಿ ಬೇಡಿಕೊಂಡರು. ಆಗ ಚೆನ್ನಬಸವ ಸ್ವಾಮಿಗಳು ಶಿವಯೋಗಿಗಳ ಇಷ್ಟಾನುಸಾರವಾಗಿ ಶ್ರೀ ಸಿದ್ಧಲಿಂಗ ಸ್ವಾಮಿಗಳಿಗೆ ಚರ ಪಟ್ಟಾಧಿಕಾರವನ್ನು ಒಪ್ಪಿಸಿ ಲಿಂಗೈಕ್ಯರಾದರು. ಶಾಂತಮೂರ್ತಿಗಳಾದ ಸಿದ್ಧಲಿಂಗ ಸ್ವಾಮಿಗಳು ಶಿವಯೋಗಿಗಳ ದೇಹದ ನೆರಳಿನಂತೆ ಅವರನ್ನು ಅನುಸರಿಸುತ್ತ ವಿಖ್ಯಾತರಾಗಿ ಬಾಳಿಬೆಳಗಿದರು [illegible] ಜಂಗಮ ಕುಲಾವತಂಶರೆನಿಸಿದರು.

## ಪಕ್ಷಿಗಳ ತತ್ತ್ವಪ್ರದರ್ಶನ

ದಾಸೋಹ ಪ್ರಿಯರಾದ ಸಿದ್ಧಲಿಂಗ ಸ್ವಾಮಿಗಳು ಗಚ್ಚಿನಮಠಕ್ಕೆ ಆಗಮಿಸುವ ಸದ್ಭಕ್ತರ ಯೋಗಕ್ಷೇಮವನ್ನು ವಿಚಾರಿಸುತ್ತ ನಿತ್ಯ ದಾಸೋಹವನ್ನು ನಡೆಸುತ್ತಿದ್ದರು. ಇವರು ಭಕ್ತರಿಂದ ಬರುವ ಕಾಣಿಕೆ ಮುಂತಾದವುಗಳನ್ನು ಮಠದಲ್ಲಿ ನಡೆಯುವ ಸಂಸ್ಕೃತ ಪಾಠಶಾಲೆಗೂ, ಚರಮೂರ್ತಿಗಳ ಸಂತರ್ಪಣೆಗೂ, ವಿದ್ಯಾರ್ಥಿಗಳಿಗೂ, ಅತಿಥಿಗಳಿಗೂ ವಿನಿಯೋಗಿಸುತ್ತ ಶಿವಯೋಗಿಗಳ ಅನುಗ್ರಹಕ್ಕೆ ಪಾತ್ರರಾಗಿ ನಡೆಯುತ್ತಿದ್ದರು. ಧಾರವಾಡದ ಮೃತ್ಯುಂಜಯ ಸ್ವಾಮಿಗಳೂ, ಹಲ್ಯಾಳದ ಗುರುಸಿದ್ಧ ಸ್ವಾಮಿಗಳೂ ಶಿವಯೋಗಿಗಳ ಸೇವೆಯಲ್ಲಿ ನಿತ್ಯವೂ ನಿರತರಾಗಿರುತ್ತಿದ್ದರು. ಪರಶಿವನ ಸ್ವರೂಪರಾದ ಶ್ರೀ ಶಿವಯೋಗಿಗಳ ಪ್ರಾಣವು ಸಿದ್ಧಲಿಂಗ ಸ್ವಾಮಿಗಳಾಗಿದ್ದರೆ, ಮೃತ್ಯುಂಜಯ ಸ್ವಾಮಿಗಳು ಗುರುಸಿದ್ಧ ಸ್ವಾಮಿಗಳು ಅವರ ಎರಡೂ ಕಣ್ಣುಗಳಾಗಿದ್ದರು.

ಹೀಗಿರುತ್ತಿರಲಾಗಿ ಬೆಳ್ಳಗೆ ಬೆಳ್ಳಿಯಂತೆ ಹೊಳೆಯುವ ಎತ್ತರವಾಗಿದ್ದ ಎರಡು ಪಕ್ಷಿಗಳು ಆಕಾಶ ಮಾರ್ಗದಿಂದ ಇಳಿದು ಶಿವಯೋಗಿಗಳ ಯೋಗಮಂಟಪದ ಮುಂದೆ ಇರುವ ಬಕುಳ ವೃಕ್ಷದ ಮೇಲೆ ಪ್ರತಿದಿನ ಸಾಯಂಕಾಲ ಬಂದು ಕುಳಿತುಕೊಳ್ಳುತ್ತಿದ್ದವು. ಶಿವಯೋಗಿಗಳು ಪ್ರದೋಷಕಾಲದ ಶಿವಪೂಜೆಯನ್ನು ಪೂರೈಸಿಕೊಂಡು ಹೊರಗೆ ಬಂದು ಆ ಪಕ್ಷಿಗಳಿಗೆ ಬಹು ವಿನಯದಿಂದ ಎರಡೂ ಕೈಗಳನ್ನು ಜೋಡಿಸಿ ನಮಿಸಿದ ಮೇಲೆ ಅವು ಹರ್ಷಗೊಂಡು ಮೇಲಕ್ಕೆ ಹಾರಿಹೋಗುತ್ತಿದ್ದವು. ಈ ಪ್ರಕಾರವಾಗಿ ಬಹುದಿನಗಳವರೆಗೂ ನಡೆಯಿತು. ಮಧ್ಯಕಾಲದಲ್ಲಿ ಯಾರು ಬೇಕಾದರೂ ಬಂದು ಬೆದರಿಸಿದರೂ ಆ ಪಕ್ಷಿಗಳು ಹೋಗುತ್ತಿರಲಿಲ್ಲ. ಈ ಸುದ್ದಿಯನ್ನು ಕೇಳಿ ದೂರ ದೇಶಗಳಿಂದ ಜನರು ಬರಲಾರಂಭಿಸಿದರು. ಇದರಿಂದ ಬಹಳ ಗೊಂದಲವಾಗಹತ್ತಿತು. ಹಾಗೂ ಶಿವಾರ್ಚನೆಗೆ ಆತಂಕ ಉಂಟಾಗತೊಡಗಿತು. ಒಮ್ಮೆ ಕೂಡಿದ ಭಕ್ತರು. ಶಿವಯೋಗಿಗಳಿಗೆ ಈ ಪಕ್ಷಿಗಳ ಬಗೆಗೆ ಕೇಳಲು ಎಲೈ ಭಕ್ತಜನಗಳಿರಾ, ನಮ್ಮ ಪರಮಗುರುಗಳಾದ ಮರುಳುಶಂಕರ ಸ್ವಾಮಿಗಳೂ ಗುರುಶಾಂತ ಸ್ವಾಮಿಗಳೂ ನನಗೆ ದರ್ಶನವನ್ನು ಕೊಡುವುದಕ್ಕೋಸ್ಕರ 'ಸದೇಹಾಶ್ಚ ವಿದೇಹಾಶ್ಚ' ಎಂಬ ಆರ್ಯೋಕ್ತಿಗನುಸಾರವಾಗಿ ನಿಜಾಕಾರದಿಂದಲೇ ತೋರುತ್ತಾರೆ. ಎಂದು ಹೇಳಿ ಎರಡೂ ಪಕ್ಷಿಗಳ ಕಡೆಗೆ ಚೆನ್ನಾಗಿ ನೋಡಿ ಎಲೈ ಪೂಜ್ಯ ಗುರುಗಳೇ ಇಲ್ಲಿಜನಸ್ತೋಮವು ಹೆಚ್ಚುವುದ ಲಿಂಗಾರ್ಚನೆಗೆ ತೊಂದರೆಯುಂಟಾಗುತ್ತಿದೆ. ಅದಕ್ಕಾಗಿ ಇನ್ನುಮೇಲೆ ತಾವು ಈ ಬಗೆಯಾಗಿ ಬರಕೂಡದು ಎಂದು ಹೇಳಿದರು. ಮರುದಿವಸದಿಂದ ಪಕ್ಷಿಗಳು ಆ ಸ್ಥಾನಕ್ಕೆ ಬರಲೇ ಇಲ್ಲ. ಇದನ್ನು ಕಂಡು ಜನರು ಬೆರಗಾಗಿ ಶಿವಯೋಗಿಗಳನ್ನು ಅನೇಕ ಬಗೆಯಿಂದ ಕೊಂಡಾಡಿದರು.

(ಮುಂದುವರಿಯುವುದು) ○



# ಯುವ ವರ್ಗ ಹಾಗೂ ಮಾನಸಿಕ ಉದ್ವೇಗ

—ಬಿ. ಸುಬ್ರಾಯ ಅಡಿಗ

ನಿವೃತ್ತ ಉಪಾಧ್ಯಾಯರು, ಸಂಡೂರು (583119)

ಆಧುನಿಕ ಯುಗದ ಅತಿ ದೊಡ್ಡ ಅಭಿಶಾಪವೆಂದರೆ ಉದ್ವೇಗ. ಯುವಕರೇ ಅದಕ್ಕೆ ಅತಿ ಹೆಚ್ಚು ಒಳಗಾದವರು. ಇವರ ಕಂಗಳಲ್ಲಿ ಒಂದು ರೀತಿ ಅನಿಶ್ಚಿತತೆಯ ಭಾವ ತುಂಬಿರುತ್ತದೆ. ಯುವಕರ ಮಾನಸಿಕ ಉದ್ವೇಗ ಆರ್ಥಿಕ ಕಾರಣಗಳಿಂದ ಉಂಟಾಗುವುದು. ಮಧ್ಯಮ ಹಾಗೂ ಕೆಳವರ್ಗದ ಪರಿವಾರಗಳಲ್ಲಿ ಆರ್ಥಿಕ ಅಭಾವದಿಂದ ಉಂಟಾಗುವ ಕಲಹ, ಅಸಮಾಧಾನ ಹಾಗೂ ಅಶಾಂತಿ ಯುವಕರ ಮೇಲೆ ವಿಶೇಷವಾಗಿ ಪ್ರಭಾವ ಬೀರುವುವು. ಈ ಎಲ್ಲದರ ನಡುವೆ ಅವರು ಕಾಲೇಜ್ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಅಭ್ಯಾಸ ನಡೆಸುತ್ತಾರೆ. ಶ್ರೀಮಂತ ಪರಿವಾರಗಳಿಂದ ಬರುವ ಯುವಕರೂ ಉದ್ವೇಗ ರಹಿತರಲ್ಲ. ಇವರಿಗೆ ಎಲ್ಲ ರೀತಿಯ ಸುಖಸೌಕರ್ಯ ದೊರೆ ದ್ದರೂ ಅವುಗಳ ಉಪಯೋಗದಿಂದಾಗಿ ದುಃಸ್ಥಿತಿಗೀಡಾಗುತ್ತಾರೆ. ಆಹಾರದ ಅನಿಯಮಿತತೆ, ಕಲಬೆರಕೆ ಆಹಾರ ಹಾಗೂ ಮಾದಕ ವಸ್ತುಗಳ ಸೇವನೆ ಅವರ ಉದ್ವೇಗಕ್ಕೆ ಕಾರಣವಾಗುತ್ತದೆ. ಆರ್ಥಿಕ, ಪಾರಿವಾರಿಕ ಹಾಗೂ ಮಾನಸಿಕ ಕಾರಣಗಳಿಂದ ತಲೆದೋರುವ ಉದ್ವೇಗದಿಂದಾಗಿ ಯುವಕರು ತಮ್ಮ ವಿವೇಕ ಕಳೆದು ಕೊಳ್ಳುತ್ತಾರೆ. ಪರಿಣಾಮವಾಗಿ ಹೆಜ್ಜೆ ಹೆಜ್ಜೆಗೆ ಜಗಳ ದಂಗೆ ಚಳವಳಿ ಹಾಗೂ ವಿಧ್ವಂಸಕ ಕೃತ್ಯಗಳು ನಡೆಯುತ್ತವೆ. ಉದ್ವೇಗಿಜನ್ಯ ಭಯಂಕರ ರೋಗಗಳು ಬಂದಡರುವವರೆಗೂ ಈ ದೂಷಿತ ಚಕ್ರ ಸಾಗುತ್ತಿರುತ್ತದೆ. ಹಿಂದಿನ ಯುಗದಲ್ಲೂ ಉದ್ವೇಗ ಇರಲಿಲ್ಲವೆಂತಲ್ಲ. ಆದರೆ ಯುವಕರಲ್ಲಿ ಮನೋರೋಗ, ಸ್ನಾಯುವಿಕಾರ, ಅನಿದ್ರೆ ಮೊದಲಾದವು ಇಷ್ಟೊಂದು ವಿಪುಲವಾಗಿ ಇರಲಿಲ್ಲ. ಅಮಲು ಪದಾರ್ಥಗಳ ಅಧಿಕ ಉಪಯೋಗ ಯುವಕರ ಈ ದುಃಸ್ಥಿತಿಯನ್ನು ಸ್ಪಷ್ಟಪಡಿಸುತ್ತಿದೆ. ಆದರೆ ಅವರಲ್ಲಿನ ಉದ್ವೇಗ ಸಹಿಸುವ ಶಕ್ತಿ ಕುಗ್ಗಿ ಹೋಗಿದೆ. ಉದ್ವೇಗ ಯಾವಾಗಲೂ ಘಾತಕವಲ್ಲ. ಅದು ಬದುಕಿನ ಚಿಹ್ನೆ. ವೀಣೆಯ ತಂತಿಗಳನ್ನು ಎಳೆಯುವುದರಿಂದ ಮಧುರನಾದ ಹೊರಡುವುದಷ್ಟೆ? ಆದರೆ ಈ ಎಳೆತ ಯಾವಾಗಲೂ ಇದ್ದರೆ, ಆ ತಂತಿಗಳು ಕಡಿದು ಹೋಗುವುವು ಮನುಷ್ಯನ ಸ್ಥಿತಿಯೂ ಹಾಗೆಯೇ ಯುವಕನೊಬ್ಬ ಆರಂಭದಿಂದಲೇ ಉದ್ವೇಗದ ನಡುವೆ ಬದುಕು ಸಾಗಿಸಬೇಕಾಗಿ ಬಂದರೆ ಮುಂದೆ ಅವನ ಸ್ಥಿತಿ ಏನಾದೀತೆಂದು ಸಹಜವಾಗಿಯೇ ಊಹಿಸಬಹುದು.

ಉದ್ವೇಗ ಇಂದು ಎಲ್ಲೆಡೆಯಲ್ಲೂ ಇದೆ. ಅಮೇರಿಕೆಯಲ್ಲಿ ನಡೆಸಲಾದ ಒಂದು ಸರ್ವೆ ಪ್ರಕಾರ ೧೫ ವರ್ಷಕ್ಕೆ ಮೇಲ್ಪಟ್ಟ ಜನರಲ್ಲಿ ೫೦ ರಷ್ಟು ಮಂದಿ ಅನಿದ್ರಾ ರೋಗದಿಂದ ಬಳಲುತ್ತಿದ್ದಾರೆ. ಹೆಚ್ಚಿನವರು ನಿದ್ದೆಗುಳಿಗೆಗಳನ್ನು ನುಂಗಿ ಕೃತಕ ನಿದ್ರೆ ಪಡೆಯಲು ಹವಣಿಸುತ್ತಾರೆ.

ಭಾರತದಲ್ಲೂ ಉದ್ವೇಗ ಪೀಡಿತ ಯುವಕರ ಸಂಖ್ಯೆ ದಿನ ದಿನಕ್ಕೆ ಹೆಚ್ಚುತ್ತಿದೆ. ಇಲ್ಲಿನವರ ಉದ್ವೇಗಕ್ಕೂ ಅಮೇರಿಕನರ ಉದ್ವೇಗಕ್ಕೂ ಕಾರಣ ಬೇರೆ ಬೇರೆ ಇರಬಹುದು. ಆದರೆ ಪರಿಣಾಮ ಒಂದೇ. ಇಬ್ಬರು ಹಲವಾರು ಮಾನಸಿಕ ಹಾಗೂ ಶಾರೀರಿಕ ಸಂತಾಪಗಳಿಂದ ಬಳಲುತ್ತಿದ್ದಾರೆ. ಭವಿಷ್ಯದ ಅನಿಶ್ಚಿತತೆ, ಜೀವನವನ್ನು ಸಹಜವಾಗಿ ಸ್ವೀಕರಿಸದಿರುವ ಪ್ರವೃತ್ತಿ, ಅನಿಯಮಿತತನ, ಮಾದಕವಸ್ತುಗಳ ಸೇವನೆ ಇವೆಲ್ಲ ಸೇರಿ ಸ್ನಾಯುಮಂಡಲವನ್ನು ಉತ್ತೇಜಿತಗೊಳಿಸುವುವು. ಇದು ಮೆಲ್ಲ ಮೆಲ್ಲನೆ ಅನಿದ್ರೆ, ಸಿಡುಕು, ಆಕ್ರೋಶ, ಚಿತ್ತಭ್ರಮೆ, ಅಜೀರ್ಣಮೊದಲಾದ ಕಾಹಿಲೆಗಳಿಗೆ ಕಾರಣವಾಗುವುದು.

## ಮಾದಕ ವಸ್ತುಗಳ ಬಳಕೆ

ಭಾರತದಲ್ಲಿ ಮಾದಕ ವಸ್ತುಗಳ ಬಳಕೆ ಯುವ ವರ್ಗದಲ್ಲೇ ಅತಿ ಹೆಚ್ಚಾಗಿದೆಯೆಂದು ತಿಳಿದು ಬಂದಿದೆ. ಸಾಮಾನ್ಯವಾಗಿ ವಿದ್ಯಾರ್ಥಿಗಳಲ್ಲಿ ಶರಾಬು ಹಾಗೂ ಧೂಮಪಾನದ ಚಟ ಕಾಣಿಸುತ್ತದೆ. ಶ್ರೀಮಂತ ಪರಿವಾರದವರು ಗಾಂಜಾ ಸೇವನೆಗೂ ತೊಡಗುತ್ತಾರೆ. ಹಾಸ್ಟೆಲ್‌ದಲ್ಲಿರುವವರಿಗಿಂತ ಹೊರಗಿರುವ ವಿದ್ಯಾರ್ಥಿಗಳೇ ಇಂಥ ಚಟಗಳಿಗೆ ಹೆಚ್ಚು ಹೆಚ್ಚು ಬಲಿಯಾಗುತ್ತಾರೆಂದು ಢಿಲ್ಲಿ ಹಾಗೂ ಕಲಕತ್ತಾ ವಿಶ್ವ ವಿದ್ಯಾಲಯಗಳ ವಿದ್ಯಾರ್ಥಿಗಳ ಸರ್ವೆಯಿಂದ ತಿಳಿದು ಬಂದಿದೆ.

ಮಾದಕ ವಸ್ತುಗಳ ಸೇವನೆ ಮನುಷ್ಯರ ಮೇಲೆ ಎಂತಹ ದುಷ್ಪಪ್ರಭಾವ ಬೀರುವುದೆಂದು ಎಲ್ಲರೂ ಬಲ್ಲರು, ಮಾನಸಿಕ ಉದ್ವೇಗಕ್ಕೆ ಇದೇ ಮುಖ್ಯ ಕಾರಣ. ಭಾರತದಲ್ಲಿ ಅಮೇರಿಕೆಯಲ್ಲಿರುವಷ್ಟು ಮಾದಕವಸ್ತುಗಳ ಸೇವನೆ ನಡೆಯುವುದಿಲ್ಲವೆಂಬುದು ಸಮಾಧಾನದ ಸಂಗತಿ.

ಆಂತರಿಕ ಅಸಮಾಧಾನ ಹಾಗೂ ವಿವಶತೆಯಿಂದ ಕೂಡಿದ ಯುವಜನಾಂಗ ಕ್ಷಣಿಕ ಸುಖಕ್ಕಾಗಿ ಅಮಲು ವಸ್ತುಗಳಿಗೆ ಬಲಿ ಬೀಳುತ್ತದೆ. ಭಾರತದ ಜನಸಂಖ್ಯೆ ಒಂದೇ ಸಮನೆ ಹೆಚ್ಚುತ್ತಿದೆ. ಅದಕ್ಕೆ ತಕ್ಕಂತೆ ಉದ್ಯೋಗಾವಕಾಶಗಳು ಹೆಚ್ಚುತ್ತಿಲ್ಲ. ಹೀಗಾಗಿ ನಿರುದ್ಯೋಗ ಸಮಸ್ಯೆ ತಾಂಡವವಾಡುತ್ತಿದೆ. ಜೀವನದ ಪ್ರಶ್ನೆ ಬಗೆಹರಿಯದಿದ್ದರೆ ತಾತ್ಕಾಲಿಕ ವಾಗಿಯಾದರೂ ಅದನ್ನು ಮರೆಯಲು ಜನ ಮಾದಕ ವಸ್ತುಗಳ ಮರೆ ಹೋಗುತ್ತಾರೆ.



ಇಂದು ಶಿಕ್ಷಕ ಹಾಗೂ ವಿದ್ಯಾರ್ಥಿಗಳಲ್ಲಿ ರೋಲ್ ನಂಬರ್ ದ ರಿಜಿಸ್ಟರ್ ಬಿಟ್ಟರೆ ಬೇರಾವ ಸಂಬಂಧವೂ ಉಳಿದಿಲ್ಲ. ಇದರಿಂದಾಗಿ ಯುವಕರು ದಾರಿ ತಪ್ಪುತ್ತಿದ್ದಾರೆ. ಶಾಲಾ ಕಾಲೇಜುಗಳಲ್ಲಿ ರಚನಾತ್ಮಕ ಮನೋರಂಜನೆಗಳ ವ್ಯವಸ್ಥೆಯಿಲ್ಲ. ದಿಗ್ಭ್ರಾಂತ ಯುವವರ್ಗ ಜೀವನವನ್ನು ಸಹಜರೂಪದಲ್ಲಿ ಕಾಣಲು ಅನುಕೂಲವಾಗುವಂತೆ ರಚನಾತ್ಮಕಮನೋರಂಜನೆಗೆ ಶಾಲೆಗಳಲ್ಲಿ ಏರ್ಪಾಡಾಗಬೇಕು. ಯುವಶಕ್ತಿಯನ್ನು ರಚನಾತ್ಮಕವಾಗಿ ಬಳಸಿಕೊಳ್ಳುವ ಪ್ರಯತ್ನ ನಡೆಯಬೇಕು.

ಯುವಜನಾಂಗದಲ್ಲಿ ಹೆಚ್ಚುತ್ತಿರುವ ಉದ್ವೇಗ ಹಾಗೂ ಮಾದಕ ವಸ್ತುಗಳ ಸೇವನೆಯನ್ನು ಹತೋಟಿಯಲ್ಲಿಡಲು ಮನೋವಿಜ್ಞಾನಿಗಳ ಪಾತ್ರವೂ ಮಹತ್ವಪೂರ್ಣ ಭಾರತದಲ್ಲಿ ಮನೋವಿಜ್ಞಾನಿಗಳ ಸ್ಥಾನವನ್ನು ವಿವಿಧ ಔಷಧಿಗಳು ಪಡೆದು ಕೊಂಡಿವೆ. ಇದು ಅನುಚಿತ ವಾಸ್ತವವಾಗಿ ವಿವೇಕಪೂರ್ಣ ರೀತಿಯಲ್ಲಿ ಈ ಉದ್ವೇಗಕ್ಕೆ ಚಿಕಿತ್ಸೆ ನಡೆಸಬೇಕು. ಈ ಕಾರ್ಯವನ್ನು ಮನೋವಿಜ್ಞಾನಿ ಯಶಸ್ವಿಯಾಗಿ ಈಡೇರಿಸಬಲ್ಲ ನಮ್ಮ ಸಮಾಜ ಹಾಗೂ ಸರಕಾರ ಈ ಬಗ್ಗೆ ಗಂಭೀರವಾಗಿ ಯೋಚಿಸಿ, ಯುವವರ್ಗ ಉದ್ವೇಗ ರಹಿತವಾಗುವಂತೆ ತಕ್ಕ ಉಪಾಯ ಕೈಗೊಳ್ಳಬೇಕು.

(ಹಿಂದಿಯಿಂದ)

# ತಾಂಬೂಲಕ್ಕೆ ಪ್ರಾಶಸ್ತ್ಯವೇಕೆ ?

**ಹೆಚ್. ಆರ್. ಸುನಂದ**
ಲೆಕ್ಚರರ್, ಫಸ್ಟ್ ಕ್ರಾಸ್, ಮಿಡ್ಲ್ ಕ್ಲಾಸ್ ಕಾಲೋನಿ, ತುಮಕೂರು-2.

ಭಾರತೀಯ ಸಂಪ್ರದಾಯದಲ್ಲಿ ಫಲ-ತಾಂಬೂಲ-ಮಂಗಳದ್ರವ್ಯಗಳಿಗೆ ಮಹತ್ವ ನೀಡಿ, ಅವುಗಳಿಲ್ಲದೆ ಯಾವ ಮಂಗಳ ಕಾರ್ಯಗಳು ನಡೆಯುವಂತೇ ಇಲ್ಲ. ಫಲ-ತಾಂಬೂಲ ಕೊಟ್ಟನಂತರವೇ ನಾವು ಅದನ್ನು ಭುಂಜಿಸಬೇಕು. ಮನೆಗೆ ಬಂದ ಮುತ್ತೈದೆಯರಿಗೆ, ಫಲ ತಾಂಬೂಲ ಕೊಟ್ಟು ಅವರಿಗೆ ಶ್ರೇಯಸ್ಸು ಕೋರುವ ಪರಿಪಾಟವು ನಮ್ಮಲ್ಲಿದೆ. ಆರೋಗ್ಯ ದೃಷ್ಟಿಯಲ್ಲು ಉಂಡನಂತರ, ತಾಂಬೂಲ ಸೇವನೆ ಮಾಡುವುದು ಅವಶ್ಯಕ, ತಿಂದ ಆಹಾರವನ್ನು ಚೆನ್ನಾಗಿ ಜೀರ್ಣಿಸುವ ಶಕ್ತಿ ಅದರಲ್ಲಿದೆ. ವಿಳೇದೆಲೆ ಆಯಾಯ ಪ್ರಾದೇಶಿಕ ಮಣ್ಣು-ಹವಾಗುಣಕ್ಕೆ ತಕ್ಕಂತೆ ರುಚಿಯನ್ನು ಹೊಂದಿರುತ್ತದೆ. ಯಾವುದೇ ವಿಳೇಯದೆಲೆಯನ್ನು ಸವಿದರೂ ಅದರಲ್ಲಿ ಖಾರಾಂಶ ಇದ್ದೇ ಇರುತ್ತದೆ. ಆದರೆ ಕೆಲವದರಲ್ಲಿ ಸಿಹಿಯಿಂದ ಕೂಡಿದ ಖಾರವು ಇರುತ್ತದೆ. ಈಗಿನ ಕಾಲಕ್ಕೆ ಇದೊಂದು ವ್ಯಾಪಾರದ ಉದ್ದಿಮೆಯಾಗಿ ಹೋಗಿದೆ. ಆಕರ್ಷಕವಾದ ಪಾತ್ರೆ ಡಬ್ಬಿಗಳಲ್ಲಿ ಅಂದಗೊಳಿಸಿ ಜೋಡಿಸುವ ಕ್ರಮದಿಂದಲೇ ಗಿರಾಕಿಗಳನ್ನು ಆಕರ್ಷಿಸುವುದು ಪಾನ್‌ಬೀಡ ವ್ಯಾಪಾರಿಗಳ ಕಸಬು.

ಭಾರತೀಯ ಸಂಪ್ರದಾಯವು ಎಲೆಅಡಿಕೆ ಅಥವಾ ತಾಂಬೂಲಕ್ಕೆ ಏಕಿಷ್ಟು ಪ್ರಾಶಸ್ತ್ಯ? ಮಂಗಳ ಕಾರ್ಯದಲ್ಲಿ ಎಲೆ ಅಡಿಕೆ ಕೊಡುವುದು ಬಹು ಮುಖ್ಯವಾದ.ದು. ತಾನು ಭುಂಜಿಸುವ ಮೊದಲು ಬೇರೆಯವರಿಗೆ ಕೊಟ್ಟು ತಿನ್ನಬೇಕೆಂದು ನಮ್ಮ ಹಿರಿಯರು ಹಾಕಿಕೊಟ್ಟ ಸಂಪ್ರದಾಯ. ಅವರಿಗೆ ತಿಳಿದೊ ತಿಳಿಯದೆಯೋ ಒಟ್ಟಿನಲ್ಲಿ ಮತ್ತೊಬ್ಬರಿಗೆ ಕೊಟ್ಟು ತಾವು ಸೇವಿಸುವ ಪದ್ಧತಿ ಬೆಳೆಸಿಕೊಂಡು ಬಂದರು. ಹಾಗೇಕೆ? ಅದಕ್ಕೆ ಸ್ಕಂದ ಪುರಾಣದಲ್ಲಿ ವಿವರಣೆಯಿದೆ.

ಸಮುದ್ರಮಥನ ನಡೆಯುತ್ತಿದೆ ಮಂದರ ಪರ್ವತವೇ ಕಡೆಗೋಲು, ವಾಸುಕಿಯೇ ಹಗ್ಗ, ದೇವತೆಗಳು, ದಾನವರು ಮಥನ ಕಾರ್ಯವಾರಂಭಿಸಿರುವರು. ಪರಿಣಾಮವಾಗಿ ಕೌಸ್ತುಭಮಣಿ, ಉಚ್ಚೈಶ್ರವಸ್ಸು, ಐರಾವತ, ಅಮೃತ, ಧನ್ವಂತರಿ, ಹಾಲಾಹಲ, ಕನ್ಯಾಲಕ್ಷ್ಮಿ, ಚಂದ್ರ, ಪಾರಿಜಾತ, ನವರತ್ನಗಳು, ತುಳಸಿ ಮುಂತಾದವುಗಳು ಹೊರಬಂದವು. ಚಂದ್ರನನ್ನು ಶಿರದಲ್ಲಿ ಮುಡಿದ ಚಂದ್ರಚೂಡನಾದ



ಶಿವನು ನಂಜನ್ನುಂಡ ನಂಜುಂಡನಾದನು. ಇದೇ ಸಮಯದಲ್ಲಿ ಲಕ್ಷ್ಮಿಯನ್ನು ವರಿಸಿದ ವಿಷ್ಣುವು ಲಕ್ಷ್ಮೀಕಾಂತನಾದನು. ಅಮೃತದ ಹಂಚಿಕೆಯಲ್ಲಿ ದೇವ-ದಾನವರ ನಡುವೆ ದೊಡ್ಡ ಕೋಲಾಹಲವೇ ಆಯಿತು. ಶ್ರೀ ವಿಷ್ಣುವು ಮೋಹಿನಿಯ ರೂಪವನ್ನು ಧಾರಣೆ ಮಾಡಿ ಅಮೃತ ಹಂಚುವ ಕಾರ್ಯಮಗ್ನನಾದಾಗ ದೇವತೆಗಳಿಗೆಲ್ಲಾ ತೃಪ್ತಿಕರವಾಗಿ ಬಡಿಸಿದನು. ರಾಹು ವೇಷಮರೆತು ದೇವತೆಗಳ ಪಂಕ್ತಿಯಲ್ಲಿ ಕುಳಿತಿದ್ದ ರಾಹು-ಕೇತುಗಳನ್ನು ಚಂದ್ರನು ಪತ್ತೆಹಚ್ಚಿದ ತಪ್ಪಿಗಾಗಿ ಚಂದ್ರಗ್ರಹಣ ಪೀಡಿತನಾದನು.

ದೇವತೆಗಳು ಅಮೃತಪಾನಮಾಡಿ ಅಮರರಾದರು. ಮಿಕ್ಕುಳಿದ ಅಮೃತವನ್ನು ಏನು ಮಾಡಬೇಕೆಂಬ ಸಮಸ್ಯೆ ಬಂತು. ಅವರೊಳಗೊಬ್ಬ ದೇವತೆ ಅದನ್ನು ಇಂದ್ರನ ನಂದನವನದ ವೃಕ್ಷವೊಂದರ ಬುಡಕ್ಕೆ ಹಾಕಬೇಕೆಂದು ಸೂಚಿಸಿದನು. ಮರದ ಕಂಬಕ್ಕೆ ಐರಾವತವನ್ನು ಕಟ್ಟಿದ್ದರು, ಆ ಕಂಬದ ಕೆಳಗೆ ಅಮೃತ ಸುರಿದರು. ಅಲ್ಲೇ ಇದ್ದ ಐರಾವತ ಮದದಿಂದ ಮೈಮರೆತು ಹಾಯಾಗಿತ್ತು, ಅದರ ಮದೋದಕ ಧಾರಾಕಾರವಾಗಿ ಹರಿದು ಮರದ ಕಂಬದ ಬುಡದಲ್ಲೇ ಬಿತ್ತು. ಸ್ವಲ್ಪ ದಿವಸಗಳನಂತರ ಮದೋದಕ-ಅಮೃತ ಮಿಶ್ರಣದಿಂದ ಆ ಮರದಡಿ ಒಂದು ಬಳ್ಳಿ ಸೃಷ್ಟಿಯಾಯಿತು. ಈ ಹೊಸ ಬಳ್ಳಿಯನ್ನು ಕಂಡಂತಹ ದೇವತೆಗಳು ಧನ್ವಂತರಿಯನ್ನು ಕರೆತಂದರು. ಧನ್ವಂತರಿ ಅದನ್ನು ಪತ್ತೆಹಚ್ಚಿ ಔಷಧೋಪಯುಕ್ತವಾದ ಬಳ್ಳಿಯದು. ಆರೋಗ್ಯಕ್ಕೆ ಬಹಳಷ್ಟು ಉಪಯುಕ್ತವಾದ ಆ ಬಳ್ಳಿ-ಎಲೆಯನ್ನೆ " ನಾಗವಲ್ಲಿ " ಎಂದು ಹೆಸರಿಟ್ಟನು. 'ನಾಗಬಳ್ಳಿ' ಎಂದರೆ ಆನೆಯ ಮದದಂಶ ಮಿಶ್ರಿತವಾದ ಬಳ್ಳಿ ಎಂದು ಅರ್ಥಯಿಸಿದನು. ಇದರ ಸವಿಯನ್ನು ದೇವತೆಗಳು ಸವಿದರು.

ಕಾಲಾನಂತರ ಭೂಲೋಕದ ರಾಜನೊಬ್ಬನು ಪ್ರತಿನಿತ್ಯ ಇಂದ್ರಲೋಕಕ್ಕೆ ಹೋಗಿ ದೇವೇಂದ್ರನ ಸೇವೆ ಮಾಡಲು ದಾರಿಯಲ್ಲಿದ್ದ ಆ ನಾಗವಲ್ಲಿಯನ್ನು ಇಂದ್ರನಿಗೆ ತಾಂಬೂಲ ರೂಪದಲ್ಲಿ ಸೇವಿಸುವಂತೆ ನೀಡಿ ಹಿಂತಿರುಗುತ್ತಿದ್ದನು. ಇದರಿಂದ ಸಂತೃಪ್ತನಾದ ದೇವರಾಜ ಆ ಭೂಲೋಕದ ರಾಜನಿಗೆ ಆ ನಾಗವಲ್ಲಿಯನ್ನು ರಾಜನ ಅರಮನೆಯ ಉದ್ಯಾನವನದಲ್ಲಿ ಬೆಳೆಸಿಕೊಳ್ಳುವಂತೆ ಹೇಳಿ ಅದರಿಂದ ಭೂಲೋಕದ ಜನರ ಆರೋಗ್ಯ ಭಾಗ್ಯವು ಹೆಚ್ಚಲೆಂದು ಅನುಗ್ರಹಿಸಿ ನೀಡಿದನು.

ಭೂಲೋಕಕ್ಕೆ ಬಂದ ನಂತರ ಆ ನಾಗವಲ್ಲಿ ಸೇವನೆ ಜನಪ್ರಿಯವಾಗುತ್ತಾ ಬಂದಿತು. ಅಷ್ಟೇಕೆ? ಕ್ರಮೇಣ ಜನರು ಮನಸ್ಸಿಗೆ ಬಂದಂತೆಲ್ಲಾ ಕಿತ್ತು ಎಲ್ಲೆಂದರಲ್ಲೇ ತಿನ್ನಲಿಕ್ಕಾರಂಬಿಸಿ ಕೊನೆಗೆ ಉದ್ರೇಕಚಿತ್ತರು, ಕಾಮುಕರಾಗಿ ತಾವು ಮಾಡಬೇಕಾದ ಯಜ್ಞ-ಯಾಗಾದಿ ಬಿಟ್ಟುಬಿಟ್ಟರು. ಇದರಿಂದ ದೇವತೆಗಳು ಅತೃಪ್ತರಾದರು. ಬ್ರಹ್ಮನನ್ನು ಕಂಡು ತಮ್ಮ ಕೊರತೆಯನ್ನು ದೇವತೆಗಳು ನಿವೇದಿಸಿಕೊಂಡಾಗ ಬ್ರಹ್ಮನು ತನ್ನ ಸೃಷ್ಟಿಯ ಒಬ್ಬ ದರಿದ್ರದೇವತೆಯನ್ನು ಕರೆದು ಭೂ

ಹಿಟ್ಟಿನಲ್ಲಿ ಸಿಮೆಂಟು, ಸಣ್ಣ ಮರಳು, ಒರಟು ಧಾನ್ಯಗಳ ಹಿಟ್ಟಿನ ಮಿಶ್ರಣ, ಸಕ್ಕರೆಯಲ್ಲಿ ಹಾಳಾದ ರವೆ ಇವುಗಳನ್ನು ಬೆರೆಸುವುದು ಇಂದಿನ ಕರತಲಾಮಲಕ ವ್ಯಾಪಾರೀ ಸೂತ್ರ.

ಬೇಳೆಯಲ್ಲಿ ಸುಲಭವಾಗಿ ಮಿಶ್ರಣಗೊಳಿಸುವುದು ಕೇಸರಿ ಬೇಳೆಯನ್ನು ಅದು ಕ್ಷಾಮ ಪ್ರದೇಶಗಳಲ್ಲೂ ಬೆಳೆಯುತ್ತದೆ. ಅದರಲ್ಲಿ ೫೯ ಪ್ರಭೇದಗಳಿವೆ. ೧೯೫೭ರಲ್ಲಿ ನಮ್ಮ ದೇಶದಲ್ಲಿ ಬೆರಕೆಗಾಗಿಯೇ ೪೦ ಲಕ್ಷ ಎಕರೆಗಳಲ್ಲಿ ಈ ಬೇಳೆಯನ್ನು ೫ ಲಕ್ಷ ಟನ್‌ನಷ್ಟು ಬೆಳೆಯಲಾಯಿತು. ಈ ಬೇಳೆಯಲ್ಲಿ ಪ್ರಾಣಘಾತಕವಾದ ಹೋಮೋ ಆರ್ಜಿನೀಸ್ ಮತ್ತು ಆಕ್ಸ್‌ಡಾಪ್ರೋ ಎಂಬ ಎರಡು ಅಮಿನೋ ಆಮ್ಲಗಳಿವೆ. ಇದು ನರವೇದನೆಯನ್ನು ತಂದು ನಿಧಾನವಾಗಿ ಅಂಗವಿಕಲತೆಯನ್ನು ತರುತ್ತದೆಂದು ಪುರಾತನ ಆಯುರ್ವೇದ ಗ್ರಂಥಗಳು ಎಚ್ಚರಿಸಿವೆ ಕೇಸರಿ ಬೇಳೆಯ ಮಾರಾಟವನ್ನು ಸರಕಾರ ಬಹಿಷ್ಕರಿಸಿದ್ದರೂ ಉತ್ತರ ಭಾರತದಿಂದ ಅದು ಎಲ್ಲ ರಾಜ್ಯಗಳಿಗೂ ಕಳ್ಳಸಾಗಾಣಿಕೆಯಾಗುತ್ತದೆ. ಅದನ್ನು ತಿಂದು ಪಶ್ಚಿಮ ಬಂಗಾಳದಲ್ಲಿ ೪೪೦೦೦, ಬಿಹಾರ ಮತ್ತು ಮಧ್ಯಪ್ರದೇಶದಲ್ಲಿ ೧.೨೦ ಲಕ್ಷ ಮಂದಿ 'ಲಥರಿಸಂ' ಎಂಬ ಪಾರ್ಶ್ವ ವಾಯುವಿನಿಂದ ಬಳಲುತ್ತಿದ್ದಾರೆ.

ಕಳೆದ ಶತಮಾನದ ಉತ್ತರಾರ್ಧದಲ್ಲಿ ದೀಪವುರಿಸುವ ಉದ್ದೇಶಕ್ಕಾಗಿ ತೆಗೆಯಲಾರಂಭವಾದ ದತ್ತೂರಿ ಬೀಜದ ಎಣ್ಣೆ ಇಂದು ಸಾಸಿವೆ, ಕೊಬ್ಬರಿ ಮತ್ತು ಶೇಂಗಾ ಯೆಣ್ಣೆಗಳಲ್ಲಿ ಬೆರೆಸಲ್ಪಡುತ್ತದೆ. ದತ್ತೂರಿಯಲ್ಲಿರುವ 'ಆರ್ಗೆಮೋನ್' ಎಂಬ ರಾಸಾಯನಿಕ ವಾಂತಿ-ಭೇದಿ, ಜಲೋದರ, ಅತಿಸಾರ, ಕಣ್ಣಿನ ಗ್ಲಾಕೋಮ ರೋಗ, ಚರ್ಮ ಹಾಗೂ ಮೂತ್ರಾಶಯಗಳ ಕ್ಯಾನ್ಸರ್‌ಗಳನ್ನು ತರುತ್ತದೆ. ಈ ತೈಲವನ್ನು ಶೇ. ೨ ರಷ್ಟು ಬೆರೆಸಿದರೆ ಹಾನಿಯಿಲ್ಲ. ಆದರೆ ನಮ್ಮಲ್ಲಿ ಪ್ರತಿಶತ ೫ ರಿಂದ ೧೦ ರಷ್ಟು ಬೆರಕೆಯಾಗುತ್ತಿದೆ. ೧೯೨೬ ರಲ್ಲಿಯೇ ನಮ್ಮ ವಿಜ್ಞಾನಿಗಳು ಜನತೆಯನ್ನು ಆ ತೈಲದ ಬಗೆಗೆ ಎಚ್ಚರಿಸಿದ್ದರು. ಈ ತೈಲದ ಬೆರಕೆಯಿಂದಾಗಿ ಅಲ್ಜೀರಿಯಾದಲ್ಲಿ ಸಾವಿರಾರು ಸೈನಿಕರು ಅಂಗವಿಕಲರಾಗಿ ಸರಕಾರ ಅದನ್ನು ಬೆರೆಸುವವರಿಗೆ ಮರಣ ದಂಡನೆ ವಿಧಿಸುವುದಾಗಿ ಸಾರಿತು. ೧೯೫೬ ರಲ್ಲಿ ಮತ್ತು ೧೯೬೬ ರಲ್ಲಿ ಮಹಾರಾಷ್ಟ್ರದ ಅನೇಕರು ದತ್ತೂರಿ ತೈಲದ ಬೆರಕೆಯಿಂದಾಗಿ ಜೀವ ತೆತ್ತಾಗ ಸರಕಾರ ಅದನ್ನು ನಿಷೇಧಿಸಿತು. ಸ್ವಾರಸ್ಯವೆಂದರೆ ಈ ದತ್ತೂರದ ತೈಲಕ್ಕೆ ೬೦೦ ವಿಧದ ಬೇರೆ ಬೀಜಗಳ ತೈಲವನ್ನು ಬೆರಕೆ ಮಾಡಲಾಗುತ್ತದೆಯಂತೆ.

ಶುದ್ಧವಾದ ತೆಂಗಿನೆಣ್ಣೆಯಲ್ಲಿ ೯ ಭಾಗ ಖನಿಜತೈಲ, ಇದು ೧೨ರಿಂದ ೨೦ರಷ್ಟು ವಿನಾಶಕಾರಕ. ೧೯೭೨ ರಲ್ಲಿ ಕಲ್ಕತ್ತದಲ್ಲಿ ಖಾದ್ಯತೈಲ ಉಪಯೋಗಿಸಿದ ೪೦೦ ಜನ ಕಾಲಿನ ಸ್ವಾಧೀನ ಕಳೆದುಕೊಂಡ ದುರ್ಘಟನೆ ಮರೆಯುವಂತಿಲ್ಲ. ಈ ತೈಲಕ್ಕೆ



ಪ್ಲಾಸ್ಟಿಕ್ ಕಾರ್ಖಾನೆಯ ದ್ರವರೂಪದ ರಾಸಾಯನಿಕವೊಂದನ್ನು ಮಿಶ್ರ ಮಾಡಿದ್ದರು. ಇದೇ ಕಲ್ಕತ್ತದಲ್ಲಿ ಹಿಂದೊಮ್ಮೆ ತುಪ್ಪಕ್ಕೆ ಹಾವಿನ ಕೊಬ್ಬು ಸೇರಿಸಿ ಮಾರಾಟ ಮಾಡಿದ್ದರು. ತುಪ್ಪದೊಂದಿಗೆ ಶೇ. ೭೫ ರಷ್ಟು ದನದ ಕೊಬ್ಬು, ವನಸ್ಪತಿ, ಖಾದ್ಯ ತೈಲಗಳನ್ನು ಬೆರೆಸುತ್ತಾರೆ. ಪೇಟೆಯಲ್ಲಿ ಸಿಗುವ ಮೊಸರು ಹಾಲಿನ ಪುಡಿ ಅಥವಾ ಕೆನೆತೆಗೆದ ಹಾಲಿನದು. 'ಲಸ್ಸಿ'ಯಲ್ಲಿ ಆರಾರೋಟ್, ಒತ್ತುವ ಕಾಗದದ ಚೂರುಗಳಿರುತ್ತವೆ. ಸೀಮೆ ಎಣ್ಣೆಗೆ ನೀರು ಇಲ್ಲವೇ ಡೀಸೆಲ್, ವನಸ್ಪತಿಗೆ ಹಿಂಡಿಯೂ ಬೆರೆಯುತ್ತದೆ.

ಅಡಿಕೆ ಪುಡಿಗೆ ಬಣ್ಣ ಕಟ್ಟಿದ ಈಚಲು ಮರದ ಕಾಯಿ ಮತ್ತು ಸಿಹಿಗಾಗಿ ಕ್ಯಾನ್ಸರ್ ರೋಗಕಾರಕವಾದ ದಲ್ಸಿನ್ ಎಂಬ ರಾಸಾಯನಿಕ ಸೇರಿಸುತಾರೆ. ಸೀಗೆ ಪುಡಿಗೆ ಮರದ ಪುಡಿ ಅಥವಾ ಮಣ್ಣು, ಕಾಳುಮೆಣಸಿನ ಜೊತೆಗೆ ಪಪಾಯಿ ಬೀಜ, ಮೆಣಸಿನ ಹುಡಿಗೆ ಬಣ್ಣ ಹಾಕಿದ ಕಟ್ಟಿಗೆ ಹುಡಿ ಅಥವಾ ಕ್ಯಾನ್ಸರ್ ರೋಗ ತರುವ ಅನಿಲಿಯನ್ ರಾಸಾಯನಿಕ, ಆನೆಯ ಜೀರ್ಣಶಕ್ತಿಯನ್ನೂ ತಡೆಯಬಲ್ಲ ರಾಸಾಯನಿಕ ಇಲ್ಲವೇ ರಾಳ ಬೆರೆಸಿದ ಇಂಗು ಇಂದು ಪೇಟೆಯಲ್ಲಿ ಸಿಗುತ್ತವೆ. ಮಸಾಲೆ ಹುಡಿಗೆ ಕುದುರೆ ಲದ್ದಿ ಬೆರೆಸಲು ಈ ವರ್ತಕರು ಹೇಸುವುದಿಲ್ಲ.

ಆಹಾರ ಪದಾರ್ಥಗಳಿಗೆ ರಂಗು ಬರಲು ಉಪಯೋಗಿಸುವ ಬಣ್ಣಗಳು ಅರ್ಬುದ ವ್ಯಾಧಿ ತರಬಲ್ಲದು. ಇದನ್ನೇ ಜಿಲೇಬಿಗೂ ಉಪಯೋಗಿಸುತ್ತಾರೆ. ಹಪ್ಪಳಗಳಿಗೆ ಬಣ್ಣ ನೀಡುವ 'ರ್ಹೊಟಾಮಿನ್-ಬಿ' ಯಿಂದಲೂ ಕ್ಯಾನ್ಸರ್ ಬರುತ್ತದೆ. ಅರಶಿನದ ಹುಡಿ ಅಡಿಗೆಗೆ ಬೇಕೇಬೇಕು ಅದನ್ನು ಅಚ್ಚ ಹಳದಿ ವರ್ಣಕ್ಕೆ ತರಲು ಲೆಡ್‌ಕ್ರೊಮೇಟ್ ಎಂಬ ಸೀಸಭಸ್ಮವನ್ನು ಬೆರೆಸುತ್ತಾರೆ. ಇದು ತೀವ್ರ ವಿಷಕಾರಿ, ಇದರಿಂದ ರಕ್ತದ ಕೊರತೆ, ಪಕ್ಷವಾತ, ಮಹಿಳೆಯರಿಗೆ ಗರ್ಭಪಾತವುಂಟಾಗುತ್ತದೆ. ಸೋಡಕ್ಕೆ ಬೆರೆಸುವ 'ಸೈಕ್ಲಮೇಟ್' ಕಲ್ಲಿದ್ದಲಿನ ವಿಷಕಾರಿ ರಾಸಾಯನಿಕ. ಬಿಸ್ಕತ್, ಚಾಕೊಲೆಟ್. ಪೆಪ್ಪರುಮೆಂಟುಗಳಿಗೆ ಸಕ್ಕರೆಯ ಬದಲಿಗೆ ಮಿಶ್ರಗೊಳಿಸುವ ಸ್ಯಾಕರೀನ್ ಜೀರ್ಣಶಕ್ತಿಗೆ ಧಕ್ಕೆ ತರುತ್ತದೆ. ಡಲ್‌ಸೀನ್ ಎಂಬುದು ಲಿವರಿನ ಕ್ಯಾನ್ಸರನ್ನು ಸ್ವಾಗತಿಸುತ್ತದೆ.

ಕುಂಕುಮ ಕೇಸರಿಯಲ್ಲಿ ಕಾಗದದ ಚೂರು, ಬಣ್ಣದ ದಾರ, ನಾಗಸಂಪಿಗೆ ಹೂಗಳನ್ನು ಬೆರೆಸುತ್ತಾರೆ. ಜೇನಿನಲ್ಲಿ ಸಕ್ಕರೆ ಪಾಕ, ಬಾದಾಮಿಯಲ್ಲಿ ಅದನ್ನೇ ಹೋಲುವ ಕಾಯಿಯೊಂದರ ಮಿಶ್ರಣ. ಚಹಾ ಹುಡಿಯನ್ನು ಉಪಯೋಗಿಸಿದ ಮೇಲೆ ಸಿಗುವ ಚಟಕ್ಕೆ ಬಣ್ಣ ಹಾಕಿದ ಹುಡಿ ಹಾಗೂ ಬೇರೆ ಎಲೆಗಳ ಹುಡಿಗಳ ದುರ್ಮಿಶ್ರಣ ನಡೆದೇ ಇದೆ. ವಿದೇಶಗಳಿಗೆ ಕಳುಹಿಸುವ ಸಾಮಗ್ರಿಗಳಲ್ಲೂ ನಮ್ಮ ದೇಶದವರು ಮಾಡುತ್ತಿರುವ ಕಲಬೆರಕೆಯಿಂದಾಗಿ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಭಾರತದ ಮೆಣಸು ತನ್ನ ಸ್ಥಾನವನ್ನು ಕಳೆದುಕೊಂಡಿತಲ್ಲದೆ ಏಲಕ್ಕಿಯ ಸಂಸ್ಕರಣ ಕಾರ್ಯದಲ್ಲಿ ಬಳಸುವ ಗಂಧಕ

ಧೂಪದ ಹೊಗೆಯೂ ಅನೇಕ ವ್ಯಾಧಿಗಳಿಗೆ ಕಾರಣವೆಂದು ತಿಳಿದುಬಂದಿದೆ. ಮಕ್ಕಳ ಬಿಸ್ಕತ್ತಿನಲ್ಲಿ ಗಾಜು ಮತ್ತು ಬ್ಲೇಡಿನ ಚೂರು, ಸೀಮೆಯೆಣ್ಣೆಯಲ್ಲಿ ಸಾಬೂನಿನ ನೊರೆ, ಮಸಾಲೆಯಲ್ಲಿ ತೌಡುಗಳನ್ನು ಬೆರೆಸುವ ಧೂರ್ತ ವ್ಯಾಪಾರಿಗಳು ಆಹಾರಗಳಿಗೆ ಮ್ಯಾಗ್ನಿಷಿಯಂ ಸಿಲಿಕೇಟ್, ಮರದ ತೊಗಟೆಗಳನ್ನು ಮಿಶ್ರಣಕ್ಕೆ ಉಪಯೋಗಿಸುತ್ತಾರೆ. ಪೇಟೆಯಲ್ಲಿ ಸಿಗುವ ಪುಡಿಮಾಡಿದ ಉಪ್ಪಿನಲ್ಲಿ ಕಟ್ಟಿಗೆಯ ಹೊಟ್ಟು ಬೆರೆತಿರುತ್ತದೆ.

ಭಾರತೀಯ ಔಷಧ ಕಾಯಿದೆಯ ಪ್ರತಿಬಂಧವನ್ನು ಲೆಕ್ಕಿಸದೆ ಮಾರಾಟವಾಗುತ್ತಿರುವ ಕಲಬೆರಕೆ ಔಷಧಿಗಳು ಅನೇಕರ ಪ್ರಾಣ ಹೀರಿವೆ. ಜನಪ್ರಿಯ ಹೆಗ್ಗುರುತಿನ ಡಬ್ಬಿಗಳಲ್ಲಿ ವಿಷಕಾರಕವಾದ ಸೀಮೆಸುಣ್ಣ ತುಂಬಿಸಿ ಮಾರಲಾಗುತ್ತಿದೆ. ಚರ್ಮ ರೋಗಕಾರಕವಾದ ಬೆರಕೆ ಸುಗಂಧ ದ್ರವ್ಯಗಳು ಅರಿಯದ ಜನರನ್ನು ವಂಚಿಸುತ್ತವೆ. ಕೃತಕ ಕೇಶತೈಲಗಳಿಂದಾಗಿ ಬಹು ಬೇಗನೆ ತಲೆಗೂದಲು ಬೆಳ್ಳಗಾಗುತ್ತವೆ: ಸುವಾಸನೆಯ ತೈಲಗಳಿಗೆ ಪೆಟ್ರೋಲಿಯಂ ವಸ್ತುಗಳೇ ಮೂಲ. ಶೇಂಗಾಯೆಣ್ಣೆ, ರೋಸ್ ವಾಟರುಗಳ ಕಲಬೆರಕೆಯಿಂದ ತಯಾರಾಗುವ ಟಿಲ್ ಎಣ್ಣೆ, ಚಾಮಲಿ ತೈಲದಲ್ಲಿ ಎಸೆನ್ಸ್ ಬದಲು ವೈನ್‌ನ ಬೆರಕೆ. ಪಾನ್‌ಬೀಡಗಳಲ್ಲೂ ಬೆರಕೆ ಸಾರಾಯಿಯಲ್ಲಿ ಸಲ್ಫೆಟ್, ಬ್ಯಾಟರಿ ಸೆಲ್ ಇತ್ಯಾದಿ ಬೆರಕೆ. ಅದರಿಂದ ಸತ್ತವರೆಷ್ಟೋ, ಕ್ಷಯರೋಗಕ್ಕೆ ಬಲಿಯಾದವರೆಷ್ಟೋ ಚಿನ್ನಕ್ಕೆ ತಾಮ್ರ, ಬೆಳ್ಳಿಗೆ ನಿಕ್ಕಲ್, ಖಾದಿಬಟ್ಟೆಯಲ್ಲಿ ಗಿರಣಿ ನೂಲು, ಕಾವಿ ಬಟ್ಟೆಯಲ್ಲಿ ಅನಿಲೈನ್ ರಾಸಾಯನಿಕ, ಬೆಲ್ಲಕ್ಕೆ ಕಲ್ಲು, ಸಗಣಿ, ರಾಗಿ ಹುಡಿ, ಮಯಣ–ಇವೆಲ್ಲ ಬೆರೆಸಿದರೂ ನಮಗೆ ಗೊತ್ತಿಲ್ಲ.

ಆಹಾರ ವಸ್ತುಗಳಲ್ಲಿ ಕಲಬೆರಕೆ ಅತ್ಯಂತ ಹೀನ ಕೆಲಸವೇನೋ ನಿಜ. ೧೯೫೪ರಲ್ಲಿ ಅದರ ವಿರುದ್ಧ ಶಾಸನವೊಂದನ್ನು ಅನುಷ್ಠಾನಕ್ಕೆ ತರಲಾಗಿದೆ ಆದರೆ ಹಿಂದೆ ಆಂಧ್ರ ವಿಧಾನಸಭೆಯಲ್ಲಿ ಅಕ್ಕಿಯಲ್ಲಿ ಕಲ್ಲು ಬೆರೆಸುವ ಬಗ್ಗೆ ಆಕ್ಷೇಪ ಬಂದಾಗ ಸಚಿವರೊಬ್ಬರು ಶೇ. ೨ ರಷ್ಟು ಕಲ್ಲು ಬೆರೆಸಲು ಶಾಸನದ ಅಡ್ಡಿಯಿಲ್ಲ ಎಂದುದನ್ನೂ ಇಲ್ಲಿ ಸ್ಮರಿಸಬಹುದು. ಶಾಸನ ಸಮರ್ಪಕವಾಗಿ ಜಾರಿಗೆ ಬರುವಲ್ಲಿ ಅಡ್ಡಿ ಆತಂಕಗಳು ಅನೇಕ. ಅವನ್ನು ಶೋಧಿಸುವ ಪ್ರಯೋಗಾಲಯಗಳು, ಅಧಿಕಾರಿಗಳು ಸಮಸ್ತವೂ ಇವೆ. ಮುಖ್ಯತಃ ಗ್ರಾಹಕ ಸಿಡಿದೆದ್ದು ಸರಕಾರದೊಂದಿಗೆ ಸಹಕರಿಸಿದರೆ ಸಮರ್ಪಕವಾಗಬಹುದೇನೊ! ಇಂದಿನ ಪರಿಸ್ಥಿತಿಯಲ್ಲಿ ಕುಡಿಯುವ ನೀರು, ಉಸಿರಾಡುವ ಗಾಳಿ ಎಲ್ಲವೂ ಕಲುಷಿತವೇ. ಸರಕಾರೀ ಅಧಿಕಾರಿಗಳು ನಡೆಸಿದ ಸಮೀಕ್ಷೆಯೊಂದರಿಂದ ಒರಿಸ್ಸಾದ ಪದಾರ್ಥಗಳಲ್ಲಿ ಶೇ ೬೮.೨, ರಾಜಸ್ಥಾನದ ಸಾಮಗ್ರಿಗಳಲ್ಲಿ ೪೭.೨ ರಷ್ಟು ಕಲಬೆರಕೆಯಾಗಿರುತ್ತದೆಂದು ಗೊತ್ತಾಗಿದೆ. ನಮ್ಮ ರಾಜ್ಯದ ಸರಿಯಾದ ಅಂಕೆ ಸಂಖ್ಯೆಗಳು ಲಭಿಸಿಲ್ಲ.

ಆದರೆ ಯಾವ ಸಾಮಾಗ್ರಿ ದುರ್ಮಿಶ್ರಣಗೊಂಡಿದೆಯೆಂಬುದನ್ನು ಹೇಗೆ ತಿಳಿಯುವುದು? ಅವಕ್ಕೆ ಕೆಲವು ಸೂತ್ರಗಳನ್ನು ಅನುಸರಿಸಬಹುದೆಂದು 'ಸೈನ್ಸ್‌ಟುಡೆ' ತಿಳಿಸಿದೆ.

ಬೆಣ್ಣೆ, ತುಪ್ಪಗಳಿಗೆ ವನಸ್ಪತಿ ಬೆರೆಸಿರುವ ಅನುಮಾನ ಬಂದರೆ ಕೊಂಚ ಹೈಡ್ರೋಕ್ಲೋರಿಕ್ ಆಮ್ಲದಲ್ಲಿ ಸಕ್ಕರೆಯನ್ನು ಕದಡಿ ಬೆಣ್ಣೆ ಅಥವಾ ತುಪ್ಪವನ್ನು ಅದಕ್ಕೆ ಕಾಯಿಸಿಕೊಳ್ಳಬೇಕು. ಆಗ ಅದು ಕೆಂಪಾದರೆ ವನಸ್ಪತಿ ಬೆರೆತಿದೆಯೆಂದರ್ಥ. ಇದೇ ಆಮ್ಲಕ್ಕೆ ಫೆರಿಕ್ ಕ್ಲೋರೈಡ್ ದ್ರಾವಕ ಸೇರಿಸಿ ಖಾದ್ಯ ತೈಲವನ್ನು ಹೊಯಿದಾಗ ಕಂದು ವರ್ಣ ತಾಳಿದರೆ ತೈಲದಲ್ಲಿ ದತ್ತೂರಿ ಬೆರೆತಿರುವುದು ಸ್ಪಷ್ಟ. ಹೈಡ್ರೋಕ್ಲೋರಿಕ್ ಆಮ್ಲಕ್ಕೆ ನೀರು ಬೆರೆಸಿ ಪೇಟೆಯ ಅರಿಶಿನ ಹುಡಿ ಹಾಕಿದಾಗ ರಕ್ತಕೆಂಪು ಬಣ್ಣ ತಳೆಯುತ್ತದೆ. ಇದಕ್ಕೆ ನೀರು ಹಾಕಿ ತಿಳಿಗೊಳಿಸಿದಾಗಲೂ ಕೆಂಪುಬಣ್ಣ ಮಾಯವಾಗದೆ ಹಾಗೇ ಉಳಿದರೆ ಹುಡಿಯಲ್ಲಿ ಸೀಸಭಸ್ಮ ಬೆರೆತಿದೆಯೆಂದು ತಿಳಿಯಬೇಕು. ಕೊಬ್ಬರಿಯ ತೈಲವನ್ನು ರೆಫ್ರಿಜರೇಟರಿನಲ್ಲಿರಿಸಿದಾಗ ಮೂಲತೈಲ ಗಟ್ಟಿಯಾಗುತ್ತದೆ ಅದಕ್ಕೆ ಯಂತ್ರಗಳ ಕೀಲೆಣ್ಣೆ ಬೆರೆಸಿದ್ದರೆ ಪ್ರವರೂಪದಲ್ಲಿಯೇ ಉಳಿಯುವುದು. ಇತರ ತೈಲಗಳನ್ನು ಈ ರೀತಿ ಪರೀಕ್ಷಿಸಲೂ ಸಾಧ್ಯವಿಲ್ಲ.

ಹಾಲು ಮತ್ತು ಅದರಿಂದ ತಯಾರಿಸಿದ ಪದಾರ್ಥಗಳಲ್ಲಿ ಹಿಟ್ಟು ಬೆರೆಸಿದ್ದರೆ ಅವುಗಳಿಗೆ ಅಯೋಡಿನ್ ಹಾಕಿದಾಗ ನಸು ನೀಲಿವರ್ಣ ತಾಳಬಹುದು. ಹಾಲಿನಲ್ಲಿ ನೀರು ಬೆರೆತಿದ್ದರೆ ಲ್ಯಾಕ್ಟೋಮೀಟರಿನಿಂದ ತಿಳಿಯಬಹುದು.

ಜೇನುತುಪ್ಪಕ್ಕೆ ಸಕ್ಕರೆ ಪಾಕ ಬೆರೆಸಿದೆಯೋ ನೋಡಲು ಕೊಂಚ ಜೇನನ್ನು ಕಾಗದಕ್ಕೆ ಸವರಬೇಕು ಸಕ್ಕರೆ ಪಾಕ ಬೆರೆಸಿದ್ದರೆ ಕಾಗದ ನೆನೆದಿರುತ್ತದೆ. ಚಹಾದ ಚರಟಕ್ಕೆ ಬಣ್ಣ ಹಾಕಿದ್ದರೆ ಆ ಹುಡಿಯನ್ನು ನೀರಿನಲ್ಲಿ ಕದಡಿ ಕಾಗದಕ್ಕೆ ಸವರಿದರೆ ಬಣ್ಣ ಹರಡಿಕೊಳ್ಳುತ್ತದೆ. ಮೆಣಸಿಗೆ ಪಪಾಯಿ ಬೀಜ, ರವೆಗೆ ರೈಧಾನ್ಯ, ಪಾನ್ ಸುಪಾರಿಗೆ ಮರದ ಹುಡಿ ಬೆರೆತಿರುವ ಅನುಮಾನ ಬಂದರೆ ಅದನ್ನು ನೀರುತುಂಬಿದ ಪಾತ್ರೆಗೆ ಹಾಕಬೇಕು. ಆಗ ಮಿಶ್ರಗೊಳಿಸಿದ ವಸ್ತು ನೀರಿನಲ್ಲಿ ತೇಲುತ್ತದೆ. ಮೆಣಸಿನ ಹುಡಿ ಮತ್ತು ಕಾಫಿ ಹುಡಿಯ ಕಲಬೆರಕೆಯನ್ನೂ ಇದೇ ರೀತಿ ಕಂಡುಹಿಡಿಯಬಹುದು. ಮೆಣಸಿನ ಹುಡಿಯಲ್ಲಿ ಇಟ್ಟಿಗೆಯ ಹುಡಿ ಬೆರೆಸಿದ್ದರೆ ನೀರಿಗೆ ಹಾಕಿದ ಕೂಡಲೇ ಬಣ್ಣ ಬಿಡುತ್ತದೆ.

ತೂಕ ಭರ್ತಿಗಾಗಿ ಗೋಧಿಯಲ್ಲಿ ಕಬ್ಬಿಣದ ಹುಡಿ ಬೆರೆಸಿದರೆ ಒಂದು ಲೋಹ ಚುಂಬಕದ ಚೂರಿನಿಂದ ಅದನ್ನು ಗುರುತಿಸಬಹುದು. ಹುಲ್ಲಿನ ಬೀಜಕ್ಕೆ ಇದ್ದಲಿನ ಬಣ್ಣ ಹಚ್ಚಿ ಶಾಜೀರಗೆಯಲ್ಲಿ ಬೆರೆಸುತ್ತಾರೆ. ಅದನ್ನು ಅಂಗೈಯಲ್ಲಿ ತಿಕ್ಕಿ ನೋಡಿ

ದಾಗ ಬೀಜ ಬಣ್ಣ ಕಳೆದುಕೊಂಡು ತನ್ನ ಬೆರಕೆಯಾಗಿರುವುದು ತೋರಿಸುತ್ತದೆ. ಬೂರಾ ಸಕ್ಕರೆಗೆ ಲಿಂಬೆಹಣ್ಣು ಹಿಂಡಿದಾಗ ನೊರೆ ಬಂದರೆ ಅದರಲ್ಲಿ ಸೋಡಾ ಬೆರಕೆಯಾಗಿದೆಯೆಂದೂ ಅಯೊಡಿನ್ ಹಾಕಿದಾಗ ನಸು ನೀಲಿ ವರ್ಣ ತಾಳಿದರೆ ಮೈದಾ ಹಿಟ್ಟಿನ ಮಿಶ್ರಣವಾಗಿದೆಯೆಂದೂ ತಿಳಿಯಬೇಕು. ಆದರೆ ಬೇರೆ ಕೆಲವು ಮಿಶ್ರಣಗಳು ಪ್ರಯೋಗಾಲಯಗಳಲ್ಲಿ ಮಾತ್ರ ಗೊತ್ತಾಗಬಹುದು.

ಭಾರತೀಯ ಪ್ರಜೆಯನ್ನು ಕಾಡುತ್ತಿರುವ ನಿತ್ಯ ಸಮಸ್ಯೆಗಳಲ್ಲಿ ಕಲಬೆರಕೆಯೂ ಒಂದು. ಯಾವ ಪದಾರ್ಥವನ್ನು ತಿಂದರೆ ಯಾವ ವ್ಯಾಧಿ ಅಂಟುತ್ತದೋ ಹೇಳುವಂತಿಲ್ಲ. ನಗರಸಭೆಯ ಆಹಾರ ವಿಭಾಗದಲ್ಲಿ ಆಹಾರ ಕಲಬೆರಕೆಯ ಶೋಧನೆಯ ಅಧಿಕಾರ ವರ್ಗವಿದೆ. ಕಲಬೆರಕೆ ಮಾಡುವವರಿಗೆ ಶಿಕ್ಷೆ ವಿಧಿಸುವ ಅವಕಾಶವಿದೆ. ಆದರೆ ಕಲಬೆರಕೆಯನ್ನೇ ವೃತ್ತಿಯಾಗಿ ಮಾಡಿಕೊಂಡು ಗ್ರಾಹಕರನ್ನು ಶೋಷಿಸುತ್ತಿರುವ 'ರಖಂ' ವ್ಯಾಪಾರಿಗಳ ಸದೆಬಡಿಯುವ ಕಾರ್ಯ ಮಾತ್ರ ನಡೆಯುತ್ತಿಲ್ಲ.

ಆಸ್ಪತ್ರೆಗಳಲ್ಲಿರುವ ಪ್ರತಿ ಶತ ರೋಗಿಗಳ ಪೈಕಿ ೫೫ ಮಂದಿ ಕಲಬೆರಕೆ ಆಹಾರದಿಂದಾಗಿ ವಿವಿಧ ರೋಗಗಳಿಗೆ ಬಲಿಯಾದವರು. ೩೦ ಲಕ್ಷ ಮಕ್ಕಳು ಅಪಾಯದ ಸುಳಿಯಲ್ಲಿ ಸಿಲುಕಿದ್ದಾರೆ ನೀವು ತಿನ್ನುವ ಅನ್ನದಲ್ಲಿ ಒಂದು ತುತ್ತು ವಿಷ!. ೫೦ ಲಕ್ಷ ಟನ್ ಆಹಾರ ಪದಾರ್ಥದಲ್ಲಿ ಬೆರಕೆಯಾಗಿರುವ ವಿವಿಧ ಸಾಮುಗ್ರಿಗಳು ೨ ಲಕ್ಷ ಟನ್. ೧೯೬೦ ರ ದಶಕದಲ್ಲಿ ನಮ್ಮ ರಾಜ್ಯ ಸರಕಾರ ನಡೆಸಿದ ಒಂದು ಸಮೀಕ್ಷೆಯಿಂದ ಶೇ. ೬೦ ರಷ್ಟು ಪದಾರ್ಥಗಳು ಕಲಬೆರಕೆಯೆಂಬುದು ಗೊತ್ತಾಗಿದೆ. ಒಂದು ದಶಕದಲ್ಲಿ ನಾವು ತಿಂದಿರುವ ಬೆರಕೆ ಆಹಾರ ಶೇ ೩೭ ರಷ್ಟು, ಬೆರಕೆ ಹಾಲು ೫೪ ರಷ್ಟು. ಈ ಅವಧಿಯಲ್ಲಿ ಶೇ. ೭೬ ಬೆರಕೆ ಎಣ್ಣೆ, ಶೇ ೨೫ ಬೆರಕೆ ಬೆಣ್ಣೆ, ಶೇ. ೧೯ ಬೆರಕೆ ಕಾಫಿ, ಶೇ ೩೧ ಬೆರಕೆ ಖಾದ್ಯ ಪದಾರ್ಥಗಳನ್ನು ಸೇವಿಸಿದ್ದೇವೆ. ಕಲಬೆರಕೆಯ ಆಹಾರದ ತೊಂದರೆಗಳಿಂದ ಆ ದಶಕದಲ್ಲಿ ೬ ಲಕ್ಷ ಮಂದಿ ಸತ್ತಿದ್ದಾರೆ. ಮಕ್ಕಳ ಬೆಳವಣಿಗೆ ನಾಲ್ಕರಲ್ಲೊಂದಂಶ ಕುಂಠಿತವಾಗಿದೆ.

ಕಲಬೆರಕೆ–ಒಂದು ಸಾಮೂಹಿಕ ಕೊಲೆಯ ಯತ್ನ. ೧೯೭೫ ರಲ್ಲಿ ಕೇಂದ್ರ ಸರಕಾರ ಕಲಬೆರಕೆ ಅಪರಾಧಿಗಳಿಗೆ ಸಾವಿರ ರೂಪಾಯಿ ಜುಲ್ಮಾನೆ ಮತ್ತು ೬ ತಿಂಗಳ ಸೆರೆವಾಸದ ಶಿಕ್ಷೆಯನ್ನು ನಿರ್ಧರಿಸಿತು. ಆದರೆ ಈ ಶಿಕ್ಷೆಯನ್ನು ಪಡೆದ ಅಪರಾಧಿಗಳು ಮಾತ್ರ ಬೆರಳೆಣಿಕೆಯಷ್ಟು.



# ಮಕ್ಕಳ ಆರೋಗ್ಯರಕ್ಷಣೆ—ಹೊಸ ಯುಗಾರಂಭ

## ಭಾಗ-3

ಡಾ॥ ಎಚ್. ಡಿ. ಚಂದ್ರಪ್ಪಗೌಡ, ಎಂ.ಬಿ.ಬಿ.ಎಸ್., ಎಂ.ಎಸ್.
62, ಶ್ರೀನಿವಾಸ ನಿಲಯ, ಮಿಷನ್ ಕಾಂಪೌಂಡ್, ಶಿವಮೊಗ್ಗ-577201

**ಮಕ್ಕಳ ಬೆಳವಣಿಗೆಯ ಪರಿಶೀಲನೆ :**

ಪದೇ ಪದೇ ವಾಂತಿ, ಭೇದಿ ಹಾಗೂ ಸೋಂಕು ರೋಗಗಳಿಂದ ನರಳುವ ಮಕ್ಕಳು ನ್ಯೂನ ಪೋಷಣೆಯಿಂದ ದಿನೇ ದಿನೇ ಕ್ಷೀಣಿಸುವುದು ಸ್ವಾಭಾವಿಕ. ಮಗುವಿನೊಡನೆ ಸದಾಕಾಲ ನಿಕಟ ಸಂಪರ್ಕವಿರುವ ತಾಯಿ ಈ ವ್ಯತ್ಯಾಸವನ್ನು ಸಕಾಲದಲ್ಲಿ ಗುರುತಿಸಲಾರಳು. ಪ್ರತಿ ತಿಂಗಳು ಮಗುವನ್ನು ತೂಕಮಾಡುವ ಪರಿಪಾಠ ಈ ದಿಸೆಯಲ್ಲಿ ಸಹಾಯಕವಾಗಬಹುದು. ಕೆಲವು ರಾಷ್ಟ್ರಗಳಲ್ಲಿ ಈ ಏರ್ಪಾಟು ಸಾಮೂಹಿಕವಾಗಿ ನಡೆಯುತ್ತದಂತೆ ಈ ರೀತಿ ಏರ್ಪಾಡುಗಳಿಲ್ಲದಿರುವೆಡೆಗಳಲ್ಲಿ ಆಸ್ಪತ್ರೆ, ಖಾಸಗಿ ವೈದ್ಯರು ಅಥವಾ ಹತ್ತಿರದ ಅಂಗಡಿಗಳಲ್ಲಿ ಪ್ರತಿ ತಿಂಗಳು ಮಗುವನ್ನು ತೂಕ ಮಾಡಿಸುವ ವ್ಯವಸ್ಥೆ ಮಾಡಲೂ ಸಾಧ್ಯವಾಗಬಹುದು. ಒಳ್ಳೆಯ ಆರೋಗ್ಯವಂತ ಮಗುವಿನ ಬೆಳವಣಿಗೆ ಮತ್ತು ತೂಕದ ಪ್ರಗತಿಯನ್ನು ಪ್ರತಿ ತಿಂಗಳೂ ಗುರುತಿಸಿ ತಯಾರಿಸಿದ ರೇಖಾಪಟಗಳ (Growth Charts) ಈಗ ಲಭ್ಯವಿವೆ. ಕ್ಷೀಣಿಸುತ್ತಿರುವ ಮಗುವಿನ ತೂಕವನ್ನು ಪ್ರತಿ ತಿಂಗಳು ತಿಳಿದುಕೊಂಡು ಅಂತ ರೇಖಾಪಟದಲ್ಲಿನ ಮಗುವಿನ ರೇಖೆಯ ಪಕ್ಕದಲ್ಲಿ ಗುರುತಿಸುತ್ತಾ ಹೋದರೆ ವ್ಯತ್ಯಾಸ ಎದ್ದು ಕಾಣುತ್ತದೆ ಆರೋಗ್ಯವಂತ ಶಿಶುವಿನ ತೂಕ ಸಾಮಾನ್ಯವಾಗಿ ಆರು ತಿಂಗಳಲ್ಲಿ ದ್ವಿಗುಣ, ವರ್ಷದಲ್ಲಿ ತ್ರಿಗುಣವಾಗಿ, ಎರಡನೇ ವರ್ಷದಲ್ಲಿ ನಾಲ್ಕುಪಟ್ಟು ಹೆಚ್ಚುತ್ತಿರುವುದು ಸ್ವಾಭಾವಿಕ.

ಮಕ್ಕಳ ನ್ಯೂನ ಪೋಷಣೆಯ ಪರಿಹಾರಕ್ಕೆ ಬೆಲೆಬಾಳುವ ಟಾನಿಕ್ಕು, ಕೃತಕ ಹಾಲು ಮತ್ತು ಅಂಗಡಿಗಳಲ್ಲಿ ಮಾರಾಟವಾಗುವ ಪೌಷ್ಟಿಕ ಆಹಾರ ಸಾಮುಗ್ರಿಗಳು ಅತ್ಯವಶ್ಯಕವೆಂಬ ತಪ್ಪು ಕಲ್ಪನೆ ಈಗ ಹೆಚ್ಚಿನ ಪೋಷಕರಲ್ಲಿದೆ. ಎಂತಹ ಬಡ ಕುಟುಂಬದಲ್ಲೂ ಲಭ್ಯವಿರುವ ಆಹಾರ ಸಾಮುಗ್ರಿಗಳ ಸರಿಯಾದ ಬಳಕೆಯಿಂದ ಅವರ ಮಕ್ಕಳ ಆರೋಗ್ಯವನ್ನು ಕಾಪಾಡಲು ಸಾಧ್ಯವೆಂಬ ಅರಿವು ಎಲ್ಲರಲ್ಲೂ ಮೂಡುವಂತಾಗಬೇಕು. ಇದೇ ರೀತಿ ಮಗುವಿಗೆ ಅತಿಸಾರ, ಅಥವಾ ಇತರ ಕಾಯಿಲೆಗಳ ಸಂದರ್ಭದಲ್ಲಿ ಎಂದಿನಂತೆ ಆಹಾರ ನೀಡಬಾರದೆಂಬ ತಪ್ಪು ಗ್ರಹಿಕೆಯೂ

ಕೆಲವರಲ್ಲಿದೆ ಸತ್ಯಸಂಗತಿಯೆಂದರೆ ಅಂತಹ ಸಮಯ ಮಕ್ಕಳ ಆಹಾರದ ಬೇಡಿಕೆ ಜಾಸ್ತಿಯಾಗಿದ್ದು ಅದನ್ನು ಕಡಿಮೆ ಮಾಡುವುದು ಸರಿಯಲ್ಲ. ಮಕ್ಕಳ ತೃಪ್ತಿಕರ ಬೆಳವಣಿಗೆಗೆ ಈ ಕೆಳಗಿನ ಪಂಚ ಸೂತ್ರಗಳ ಆಚರಣೆ ಸಹಕಾರಿಯಾಗಬಲ್ಲುದು.

1 ಕನಿಷ್ಠಪಕ್ಷ ಒಂದು ವರ್ಷದವರೆಗಾದರೂ ಮೊಲೆಯೂಣಿಸುವುದು.

2 ಮಗುವಿಗೆ 4-5 ತಿಂಗಳಾಗುವಾಗಲೇ ಮನೆಯಲ್ಲಿ ದೊರೆಯುವ ಆಹಾರ ಪದಾರ್ಥಗಳನ್ನು ಹಂತ ಹಂತವಾಗಿ ನೀಡಲು ಪ್ರಾರಂಭಿಸುವುದು. ಮೆತ್ತನೆಯ ತರಕಾರಿ ಹಗೂ ಕೊಬ್ಬಿನ ಅಂಶಗಳಿರುವ ಆಹಾರವನ್ನು ಕೊಡುವುದಕ್ಕೆ ಶುರು ಮಾಡಬೇಕು.

3 ಮಕ್ಕಳ ಜಠರ ಕಿರಿದಾಗಿರುವುದರಿಂದ ಪದೇ ಪದೇ ಆಹಾರ ನೀಡಬೇಕಾಗುತ್ತದೆ.

4 ವಾಂತಿಭೇದಿ. ಜ್ವರ ಮುಂತಾದ ಕಾಯಿಲೆಗಳಿರುವಾಗಲೂ ಆಹಾರದ ಪ್ರಮಾಣ ಕಡಿಮೆ ಮಾಡಬಾರದು. ಕಾಯಿಲೆಯಿಂದ ಚೇತರಿಸಿಕೊಳ್ಳುವ ಸಮಯದಲ್ಲಂತೂ ಬೆಳವಣಿಗೆಯ ನಷ್ಟವನ್ನು ತುಂಬಲು ಸರಿಯಾದ ಪ್ರಮಾಣದಲ್ಲಿ ಸೂಕ್ತ ಆಹಾರವನ್ನು ಕೊಡಬೇಕಾಗುತ್ತದೆ.

5 ಮಗುವಿನ ಆಹಾರ ತಯಾರಿಸಿಕೊಡುವ ಪ್ರತಿಯೊಬ್ಬರೂ ವೈಯಕ್ತಿಕ ಸ್ವಚ್ಛತೆಗೆ ಆದ್ಯ ಗಮನ ಕೊಡಬೇಕು. ಶೌಚಗೃಹಕ್ಕೆ ಹೋದಾಗ ಮತ್ತು ಮಗುವಿನ ಆಹಾರ ತಯಾರಿಸುವ ಮುನ್ನ ಕೈಗಳನ್ನು ಸಾಬೂನಿನಿಂದ ಸರಿಯಾಗಿ ಕೈ ತೊಳೆದು ಸ್ವಚ್ಛಗೊಳಿಸಬೇಕು.

ಈ ತನಕ ಮಕ್ಕಳ ಆರೋಗ್ಯ ರಕ್ಷಣೆಯ ವಿಷಯದಲ್ಲಿ ಯುನಿಸೆಫ್ ನಿರೂಪಿಸಿದ ನಾಲ್ಕು ಸರಳ ಹಾಗೂ ಅತ್ಯಸುಲಭ ಮತ್ತು ಹೆಚ್ಚು ಖರ್ಚು ತಗಲದಂತೆ ಸೂತ್ರಗಳ ರೂಪು ರೇಷೆಗಳ ಸಂಕ್ಷಿಪ್ತ ವಿವರಣೆ ನೀಡಲಾಯಿತು. ಆದರೆ ಅವುಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಹೊಣೆಯಾರದ್ದೆಂಬುದು ಮುಂದಿನ ಪ್ರಶ್ನೆ. ಆಯಾ ದೇಶಗಳ ಸರ್ಕಾರಿ ಆರೋಗ್ಯ ಸೇವಾ ವ್ಯವಸ್ಥೆಗಳು ಈ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕೆಂಬುದು ಮೇಲ್ನೋಟಕ್ಕೆ ಸಮಂಜಸವೆನಿಸದಿರಲಾರದು. ಈ ವ್ಯವಸ್ಥೆಗಳು ಈಗ ಜರುಗಿಸುತ್ತಿರುವ ಕಾರ್ಯಕ್ರಮಗಳು ಎಷ್ಟು ಅಸಮರ್ಪಕವಾಗಿವೆಯೆಂದರೆ, ಹಿಂದುಳಿದ ರಾಷ್ಟ್ರಗಳಲ್ಲಿನ ಮೂರನೆ ಎರಡು ಭಾಗದಷ್ಟು ಜನ ತೀರಾ ಸಾಮಾನ್ಯ ಪ್ರಾಥಮಿಕ ಆರೋಗ್ಯ ಸೇವೆಯಿಂದ ವಂಚಿತರಾಗಿರುವುದು ಸರ್ವ ವಿದಿತ. ಈ ತರದ ವ್ಯವಸ್ಥೆಗಳಲ್ಲಿ ಆಸ್ಪತ್ರೆ ಮತ್ತು ಆರೋಗ್ಯ ಕಾರ್ಯಕರ್ತರೇ ಕೇಂದ್ರ ಬಿಂದುವಾಗಿದ್ದು ಅವುಗಳ ಪ್ರಯೋಜನ ಪಡೆಯುವ



ಜನರು ಅಂತಹ ವೃತ್ತದ ಪರಿಧಿಯಲ್ಲಿದ್ದಂತಾಗಿದೆ. ಬಹುಶಃ ಈ ವೃತ್ತವನ್ನು ಒಳಹೊರಗೆ ತಿರುವಿದಂತೆ ಮಾಡಿ ಈ ಕಾರ್ಯಕ್ರಮಗಳ ಪ್ರಯೋಜನ ಪಡೆಯುವ ತಾಯಿ ಮತ್ತು ಮಗುವನ್ನು ಕೇಂದ್ರ ಬಿಂದುವನ್ನಾಗಿರಿಸಿ, ಆಸ್ಪತ್ರೆ ಮತ್ತು ಆರೋಗ್ಯ ಕಾರ್ಯಕರ್ತರು ವೃತ್ತದ ಪರಿಧಿಗೆ ಬರುವಂತೆ ಬದಲಾಯಿಸಿದರೆ ನಿರೀಕ್ಷಿಸಿದ ಪರಿಣಾಮ ಬರಬಹುದು. ಕಾರಣವಿಷ್ಟೆ: ಮಗುವಿನ ಆರೋಗ್ಯ ಮತ್ತು ಬೆಳವಣಿಗೆಯ ಪ್ರಗತಿಯಲ್ಲಿ ತಾಯಿಯ ನಿರ್ಧಾರಗಳೇ, ಅತಿ ಮುಖ್ಯವಾದವು.

ಗರ್ಭಿಣಿಯಾದಾಗ ಧನುರ್ವಾಯು ನಿರೋಧದ ರಕ್ಷಣೆ ಪಡೆಯುವುದು.

ಸರಿಯಾದ ಪರಿಸರ ಮತ್ತು ಸೂಕ್ತ ಮೇಲ್ವಿಚಾರಣೆ ಇರುವಲ್ಲಿ ಹೆರಿಗೆ ಮಾಡಿಸಿ

ಕೊಳ್ಳುವುದು.

ಶಿಶುವಿಗೆ ವಾಂತಿ ಭೇದಿಯಾದಾಗ ಮರುನೀರ್ಗೂಡಿಕೆ ಪರಬತ್ತು ತಯಾರಿಸಿ

ಕುಡಿಸುವ ನಿರ್ಧಾರ.

ದೀರ್ಘಕಾಲ ಮೊಲೆಯುಣಿಸುವ ಹಾಗೂ ಕೃತಕ ಹಾಲು ಬಳಸುವ ನಿರ್ಧಾರ

ಮತ್ತು ಸಮಯಕ್ಕೆ ತಕ್ಕ ಆಹಾರ ನೀಡುವುದು.

ವೈಯಕ್ತಿಕ ಸ್ವಚ್ಛತೆ ಕಾಪಾಡಿಕೊಂಡಿದ್ದು, ಮಗುವಿಗೆ ಸೋಂಕು ತಗಲದಂತೆ

ಎಚ್ಚರವಹಿಸುವುದು ;

ರೋಗ ನಿರೋಧಕ ಲಸಿಕೆಗಳ ಸರಣಿಯನ್ನು ಸೂಕ್ತ ಸಮಯದಲ್ಲಿ ಆರಂಭಿಸಿ

ಪೂರ್ಣಗೊಳಿಸುವುದು ;

ಕುಟುಂಬ ಯೋಜನೆಯನ್ನು ಅನುಸರಿಸಿ, ಮುಂದಿನ ಮಗುವಾಗುವುದರ ಅಂತರವನ್ನು ನಿರ್ಧರಿಸುವುದು, ಇತ್ಯಾದಿ ಎಲ್ಲಾ ರೋಗಗಳೂ ತಾಯಿಯಿಂದಲೇ ಆಗಬೇಕಾಗುವುದು ಅನಿವಾರ್ಯ.

ಪ್ರತಿಯೊಬ್ಬ ತಾಯಿಗೂ ಈ ಹೊಣೆಗಳ ಬಗ್ಗೆ ಸರಿಯಾದ ಆರೋಗ್ಯ ಶಿಕ್ಷಣ ದೊರೆಯುವಂತೆ ಸೂಕ್ತ ವ್ಯವಸ್ಥೆ ಮಾಡುವುದು ಮೊದಲ ಹೆಜ್ಜೆ, ಅವುಗಳನ್ನು ಕಾರ್ಯಗತ ಮಾಡುವಲ್ಲಿ ಆಕೆಯ ಪತಿ' ಅತ್ತೆ ಮಾವ ಮತ್ತು ಕುಟುಂಬದ ಇತರ ಸದಸ್ಯರ ಸಂಪೂರ್ಣ ಸಹಾಯ ಮತ್ತು ಸಹಕಾರವೂ ಅತಿ ಮುಖ್ಯ. ವೈದ್ಯರು, ಆರೋಗ್ಯ ಕಾರ್ಯಕರ್ತರು, ಸಮಾಜ ಸುಧಾರಕರ ಪಾತ್ರವೂ ಈ ದಿಸೆಯಲ್ಲಿ ಅತ್ಯಂತ ಮಹತ್ವದ್ದು.

## ಕರ್ನಾಟಕ-ಬಹುಮುಖ ಪ್ರಗತಿಯ ಪ್ರತೀಕ:-

### ನವೆಂಬರ್ 1, 1985—ರಾಜ್ಯೋತ್ಸವ ಆಚರಣೆ ಅರ್ಥಪೂರ್ಣ ಕಾರ್ಯಕ್ರಮಗಳ ಸ್ಮರಣೆ

ಕುಡಿಯುವ ನೀರು ಪೂರೈಕೆ:- ಗ್ರಾಮೀಣ ಪ್ರದೇಶಗಳಿಗೆ ಕುಡಿಯುವ ನೀರು ಸರಬರಾಜಿನಲ್ಲಿ ರಾಜ್ಯಕ್ಕೇ ಪ್ರಥಮ ಸಾಧನ. ಕಳೆದೆರಡು ವರ್ಷಗಳಲ್ಲಿ ಮೂವತ್ತು ಸಾವಿರ ಬಾವಿಗಳನ್ನು ತೋಡಲಾಗಿದೆ. ರಾಜ್ಯದಲ್ಲಿ ಈಗ ಒಟ್ಟು 83,624 ಕುಡಿಯುವ ನೀರಿನ ಬಾವಿಗಳಿವೆ.

ಕಡಿಮೆ ಬೆಲೆಗೆ ಅಹಾರ ಧಾನ್ಯ :- ವಾರ್ಷಿಕ ಆದಾಯ 3,500 ರೂ. ಗಳಿಗಿಂತ ಕಡಿಮೆ ಇರುವ ಗ್ರಾಮೀಣ ಪ್ರದೇಶದ ಆರ್ಥಿಕ ದುರ್ಬಲ ವರ್ಗಗಳ ಕುಟುಂಬಗಳಿಗೆ ತಲಾ ಕೆ. ಜಿ. ಗೆ ಅಕ್ಕಿಯನ್ನು 2 ರೂ, ರಾಗಿ ಮತ್ತು ಗೋಧಿಯನ್ನು 1-25 ರೂ. ಮತ್ತು ಜೋಳವನ್ನು 1-50 ರೂ.ಗೆ ಇಂದಿನಿಂದ ಕೊಡಲಾಗುವುದು

ಜನತಾ ಸೀರೆ ಮತ್ತು ಪಂಚೆ:- ಅಕ್ಟೋಬರ್ 2, 1985–ಗಾಂಧಿ ಜಯಂತಿ ದಿನದಿಂದ ವಾರ್ಷಿಕ ವರಮಾನ 3500 ರೂ.ಗಳಿಗಿಂತ ಕಡಿಮೆ ಇರುವ ದುರ್ಬಲ ವರ್ಗದ ಕುಟುಂಬಗಳಿಗೆ ಕಡಿಮೆ ಬೆಲೆಯಲ್ಲಿ ಅಗತ್ಯ ಬಟ್ಟೆ ಪೂರೈಕೆ. ಒಂದು ಪಂಚೆ ಮತ್ತು ಷರ್ಟ್ ಬಟ್ಟೆಗೆ 15. ರೂ. ಮತ್ತು ಕುಪ್ಪಸ ಬಟ್ಟೆಗೆ 12.50 ರೂ. ನಂತೆ ನೀಡಲಾಗುತ್ತಿದೆ.

ರಾಜ್ಯದಲ್ಲಿ ಗುರುತಿಸಲಾಗಿರುವ ಇಂಥ 24 ಲಕ್ಷ ದುರ್ಬಲ ಕುಟುಂಬಗಳು ಕಡಿಮೆ ಬೆಲೆಯಲ್ಲಿ ಅಹಾರ ಧಾನ್ಯ ಮತ್ತು ಬಟ್ಟೆ ಯೋಜನೆಯ ಪ್ರಯೋಜ ಪಡೆಯುಲಿವೆ.

ತಾಳಿಯ ಭಾಗ್ಯ:- ದುಂದುವೆಚ್ಚ ಇಳಿಸುವ ಮತ್ತು ಸಾಮೂಹಿಕ ವಿವಾಹ ಪ್ರೋತ್ಸಾಹಿಸುವ ಅಪೂರ್ವ ಕಾರ್ಯಕ್ರಮ ಈ ಯೋಜನೆಯಲ್ಲಿ ಪ್ರತಿ ವಧುವಿಗೆ ಒಂದು ಗ್ರಾಂ ಚಿನ್ನದ ತಾಳಿ, ಒಂದು ಜೊತೆ ಸೀರೆ ಮತ್ತು ರವಿಕೆ, ಒಂದು ಜೊತೆ ಪಂಚೆಯನ್ನು ಉಚಿತವಾಗಿ ಹಂಚಲಾಗುವುದು.

ಹೆರಿಗೆ ಭತ್ಯ:- ಬೇಸಾಯ ಕೂಲಿಕಾರ ಮಹಿಳೆಯರಿಗೆ ಹೆರಿಗೆಯ ಹತ್ತಿರದ ಕಾಲದಲ್ಲಿ 300 ರೂ. ಭತ್ಯ ಕೊಡಲಾಗುತ್ತಿದೆ ಈಗಾಗಲೇ 66,000 ಮಹಿಳೆಯರಿಗೆ ಎರಡು ಕೋಟಿ ರೂ. ನಷ್ಟು ನೆರವು ನೀಡಲಾಗಿದೆ.

ಶಾಲಾಮಕ್ಕಳಿಗೆ ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರ :- ಎಲ್ಲಾ ಶಾಲಾಮಕ್ಕಳಿಗೆ ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರ ಹಂಚುವ ಕ್ರಾಂತಿಕಾರಿ ಕಾರ್ಯಕ್ರಮವನ್ನು ಕರ್ನಾಟಕ ಸರ್ಕಾರ ಕೈಗೊಂಡಿದೆ.

ಸರ್ಕಾರಿ, ಕಾರ್ಪೊರೇಷನ್ ಹಾಗೂ ಧನ ಸಹಾಯ ಪಡೆವ ಎಲ್ಲಾ ವಿದ್ಯಾ ಸಂಸ್ಥೆಗಳಲ್ಲಿ ಮತ್ತು 2 ನೇ ತರಗತಿಯಲ್ಲಿ ಓದುವ ಮಕ್ಕಳಿಗೆ ಎರಡು ಜೊತೆ ಉಚಿತ ಸಮವಸ್ತ್ರ ನೀಡಲಾಗುವುದು. ಪರಿಶಿಷ್ಟ ಜಾತಿ ಮತ್ತು ವರ್ಗದ ಹೆಣ್ಣು ಮಕ್ಕಳಿಗೆ 3 ರಿಂದ 7ನೇ ತರಗತಿವರೆಗೂ ಈ ಅನುಕೂಲವನ್ನು ವಿಸ್ತರಿಸಲಾಗಿದೆ.

ಎಲ್ಲಾ ಸರ್ಕಾರಿ, ಕಾರ್ಪೊರೇಷನ್ ಮತ್ತು ಧನ ಸಹಾಯ ಪಡೆದ ವಿದ್ಯಾ ಸಂಸ್ಥೆಗಳಲ್ಲಿ 1 ರಿಂದ 7 ನೇ ತರಗತಿವರೆಗ ಓದುತ್ತಿರುವ ಸುಮಾರು 53 ಲಕ್ಷ ಮಕ್ಕಳಿಗೆ ಸುಮಾರು 16 ಕೋಟಿ ರೂ. ವೆಚ್ಚದಲ್ಲಿ ಉಚಿತ ಸಮವಸ್ತ್ರ ಮತ್ತು ಪಠ್ಯಪುಸ್ತಕಗಳನ್ನು ಹಂಚಲಾಗಿದೆ.

ರಾಜ್ಯದ ಸುಮಾರು 5 ಲಕ್ಷಕ್ಕೂ ಹೆಚ್ಚು ನಿರಾಧಾರಿ ವೃದ್ಧ
ವೃದ್ಧಾಪ್ಯವೇತನ :- ಕಳೆದೆರಡು ವರ್ಷಗಳಲ್ಲಿ 55.6 ಕೋಟಿ ರೂ. ಈ ಯೋಜನೆಗೆ ವೆಚ್ಚವಾಗಿದೆ.
ರಿಗೆ ಮಾಸಿಕ 50 ರೂ. ನಂತೆ ವೃದ್ಧಾಪ್ಯ ವೇತನ ನೀಡಲಾಗುತ್ತಿದೆ

ವಿಧವೆಯುವರಿಗೆ ಮಾಸಾಶನ:- ನಿಸ್ಸಾಯಕ ವಿಧವೆಯರಿಗೆ ತಿಂಗಳಿಗೆ 50 ರೂ. ನಂತೆ ಮಾಸಾಶನ ನೀಡಲಾಗುತ್ತಿದೆ. ವಾರ್ಷಿಕ ವರಮಾನ 1500 ರೂ. ಗಿಂತ ಕಡಿಮೆ ಇರುವ ಒಂದೂವರೆ ಲಕ್ಷ ನಿರ್ಗತಿಕ ವಿಧವೆಯುವರೆಗೆ ಈ ಸೌಲಭ್ಯ ದೊರೆತಿದೆ.

ಪಂಚಾಯತಿ ರಾಜ್ಯ ಶಾಸನ :- ಈ ಶಾಸನದಿಂದ ಜನತೆಯ ಜತೆ ಅಧಿಕಾರ ಹಂಚಿಕೊಳ್ಳುವ, ಜನತಂತ್ರಕ್ಕೆ ನಿಜವಾದ ಅರ್ಥ. ಶಕ್ತಿ ಕೊಡುವ ಅಧಿಕಾರ ವಿಕೇಂದ್ರೀಕರಣದ ಮಹಾ ಪ್ರಯೋಗ ಕರ್ನಾಟಕದಲ್ಲಿ ಆರಂಭ: ಇದು ಜನರಲ್ಲಿ ಉದ್ಯಮಶೀಲ ಮತ್ತು ಸ್ವಾವಲಂಬನೆಯ ಮನೋಭಾವ ಮೂಡಿ ಮತ್ತು ಅಭಿವೃದ್ಧಿ ಯೋಜನೆಯುಲ್ಲಿ ನೇರವಾಗಿ ಪಾಲ್ಗೊಳ್ಳಲು ಪೂರಕವಾಗುತ್ತದೆ.

ಕನ್ನಡ ಭಾಷಾ ವರ್ಷ :- ಇಂದಿನಿಂದ ಕನ್ನಡ ಆಡಳಿತ ಭಾಷೆ ವರ್ಷದ ಆಚರಣೆ; ಎಲ್ಲಾ ಹಂತಗಳ ಅಡಳಿತದಲ್ಲಿ ಕನ್ನಡದ ವಿಜೃಂಭಣೆ.

ಜನಸಾಮಾನ್ಯರ ನಿತ್ಯ ಸಮಸ್ಯೆಗಳಿಗೆ ಪರಿಣಾಮಕಾರಿ ಪರಿಹಾರಕೊಟ್ಟ, ಭರವಸೆಗಳ ಈಡೇರಿಕೆ–ಕ್ಷೇಮಾಭ್ಯುದಯ ಯೋಜನೆಗಳಿಗೊಂದು ಹೊಸ ಆಯಾಮ.

ಕರ್ನಾಟಕ ವಾರ್ತೆ

ಸಾರ್ವಜನಿಕ ಆರೋಗ್ಯ ಶಿಕ್ಷಣ, ಕುಟುಂಬ ಕಲ್ಯಾಣ ಯೋಜನೆ, ಮತ್ತು ಶಿಶು ಸಂರಕ್ಷಣೆಯಂತಹ ಸ್ವಾಸ್ಥ್ಯ ಯೋಜನೆಗಳ ಯಶಸ್ವೀ ಆಚರಣೆಗೆ ನೂತನ ಪ್ರವೃತ್ತಿಯೊಂದೂ ಹಲವಾರು ದೇಶಗಳಲ್ಲಿ ಮೂಡಿಬರುತ್ತಿದೆ. ಆಧ್ಯಾತ್ಮಿಕ ಮತ್ತು ಧಾರ್ಮಿಕ ಮುಖಂಡರುಗಳು ಈ ಕಾರ್ಯಕ್ರಮಗಳಿಗೆ ಬೆಂಬಲವಿತ್ತು ಉಪದೇಶ ಮಾಡುತ್ತಿರುವುದೇ ಈ ಹೊಸ ಮಾರ್ಗ. ಧರ್ಮಗುರುಗಳು, ಮಠಾಧೀಶರು ಮತ್ತಿತರ ಧಾರ್ಮಿಕ ಮುಖಂಡರ ಕರೆಗಳಿಗೆ ಜನ ತಲೆಬಾಗುವಷ್ಟು ಇತರರ ಉಪದೇಶಗಳಿಗೆ ಮಣಿಯುವುದಿಲ್ಲವೆಂಬುದು ಸರ್ವವಿದಿತ. ಈಗಾಗಲೇ ನಮೂದಿಸಿದ ಸ್ವಾಸ್ಥ್ಯ ಕಾರ್ಯಕ್ರಮಗಳು ಯಾವ ಮತಧರ್ಮದ ತತ್ವಗಳಿಗೂ ವಿರುದ್ಧವಾಗಿಲ್ಲವೆಂಬುದೂ ಸಹಾ ಈಗ ಎಲ್ಲರೂ ಒಪ್ಪಿಕೊಂಡ ವಿಷಯವೆ. ಮುಸ್ಲಿಂ ಬಹುಸಂಖ್ಯಾತ ಇಂಡೋನೇಷ್ಯಾದ ಸಾವಿರಾರು ಇಮಾಮರು ತಮ್ಮ ಪ್ರಾರ್ಥನಾ ಸಭೆಗಳಲ್ಲಿ ಶಿಶುಗಳಿಗೆ ದೀರ್ಘ ಕಾಲ ಸ್ತನ್ಯಪಾನ ಮಾಡಿಸುವುದರ ಮಹತ್ವದ ಬಗೆಗೆ ಬೋಧಿಸುತ್ತಿದ್ದಾರಂತೆ. ಕ್ರೈಸ್ತ ದೇಶಗಳಾದ ಮಾಲ್ಡೀವ್ಸ್, ಫಿಲಿಪೈನ್ಸ್, ಬ್ರೆಜಿಲ್ ದೇಶಗಳ ಬಿಷಪರೂ, ಹಾಗೂ ಕ್ರೈಸ್ತ ಗುರುಪೀಠವಿರುವ ರೋಂ ನಗರದಲ್ಲಿ ಇತ್ತೀಚೆಗೆ ಹೊರಡಿಸಿದ ಪ್ರಕಟಣೆಯಲ್ಲಿ ಶಿಶು ಸಂರಕ್ಷಣೆಯ ಬಗೆಗೆ ಯುನಿಸೇಫ್ ನಿರೂಪಿಸಿದ ತತ್ವಗಳನ್ನು ಅನುಷ್ಠಾನಕ್ಕೆ ಎಲ್ಲರೂ ಪೂರ್ಣಸಹಾಯ, ಸಹಕಾರಗಳನ್ನು ಕೊಡುವಂತೆ ಕರೆಯಿತ್ತಿದ್ದಾರೆ. ನಮ್ಮ ದೇಶದಲ್ಲಿ ಈ ದಿಸೆಯಲ್ಲಿ ಧಾರ್ಮಿಕ ಮುಖಂಡರ ಗಮನ ಹರಿದಂತಿಲ್ಲ. ದೇಶದ ಉದ್ದಗಲದಲ್ಲಿ ನೆಲೆಯಾಗಿರುವ ಹಲವಾರು ಗೌರವಾನ್ವಿತ ಮಠಗುರುಗಳು, ಮಠಾಧೀಶರು ಮುಂತಾದ ಧಾರ್ಮಿಕ ಮುಖಂಡರು ತಮ್ಮ ಉಪದೇಶಗಳಲ್ಲಿ ಶಿಶು ಸಂರಕ್ಷಣೆಯ ಸೂತ್ರಗಳ ಬಗೆಗೆ ಅವರ ಅನುಯಾಯಿಗಳ ಗಮನ ಸೆಳೆದರೆ ಹೆಚ್ಚಿನ ಪ್ರಗತಿಯಲ್ಲಿ ನಿರೀಕ್ಷಿಸಬಹುದು.

ಯುನಿಸೇಫ್ ನಿರೂಪಿಸಿದ ಸೂತ್ರಗಳ ಆಚರಣೆಗೆ ಹೆಚ್ಚು ಹಣ ವೆಚ್ಚವಾಗಬೇಕಿಲ್ಲ. ಪರಿಣಾಮಗಳನ್ನು ಪಡೆಯಲು ಬಹಳ ವರ್ಷಗಳು ಕಾಯಬೇಕಾಗಿಲ್ಲ. ಮಕ್ಕಳ ಆರೋಗ್ಯದ ವಿಷಯದಲ್ಲಿ ಕಳಕಳಿ ಇರುವವರೆಲ್ಲಾ ಒಂದಾಗಿ ಕಾರ್ಯೋನ್ಮುಖರಾದರೆ ಶಿಶು ಸಂರಕ್ಷಣೆಯಲ್ಲಿ ಕ್ರಾಂತಿಕಾರಕ ಪ್ರಗತಿಯುಂಟಾಗಿ ಹೊಸ ಯುಗಾರಂಭವಾಗುವುದರಲ್ಲಿ ಸಂದೇಹವಿಲ್ಲ.

●

(ಆಧಾರಿತ)



# ಸಹಕಾರಿ ಸಾಗುವಳಿ

(ಮುಂದುವರಿದ ಲೇಖನ)

## ಕೃಷಿ ಕ್ಷೇತ್ರದಲ್ಲಿ ಒಂದು ಮೈಲಿಗಲ್ಲು.

—ಡಿ. ವೆಂಕಟರಾವ್, ಎಂ.ಎ.
'ಚಂದನ' ವಿದ್ಯಾನಗರ, ಹಾಸನ.

ಪ್ರಯೋಜನಗಳು :

ಸಹಕಾರಿ ಸಾಗುವಳಿಯಿಂದ ಕೆಲವು ಪ್ರಯೋಜನಗಳನ್ನು ಪಡೆಯಬಹುದು.

1 ಸಹಕಾರಿ ಸಾಗುವಳಿಯಿಂದ ಸಣ್ಣ ಪ್ರಮಾಣದ ಸಾಗುವಳಿಯಿಂದಾಗುವ ನಷ್ಟಗಳನ್ನು ತಡೆಗಟ್ಟಿ ಅಧಿಕ ಉತ್ಪಾದನೆ ಪಡೆಯುವುದರ ಮೂಲಕ ಬೆಳೆಯುತ್ತಿರುವ ಉದ್ದಿಮೆಗಳಿಗೆ ಕಚ್ಚಾ ಪದಾರ್ಥಗಳನ್ನು ಪೂರೈಸಿ ರಾಷ್ಟ್ರದ ಆರ್ಥಿಕಾಭಿವೃದ್ಧಿಯನ್ನು ಸುಲಭವಾಗಿ ಪಡೆಯಬಹುದು.

2 ಸಹಕಾರಿ ಸಾಗುವಳಿಯಿಂದ ಉಳುಮೆ ಮಾಡುವುದರಿಂದ ಭೂಮಿಯನ್ನು ಉತ್ಕೃಷ್ಟವಾಗಿಯೂ, ಪರಿಣಾಮಕಾರಿಯಾಗಿಯೂ ಉಪಯೋಗಿಸಬಹುದು. ಅಂದರೆ, ಅಧಿಕ ಬಂಡವಾಳ, ಉತ್ತಮ ಸಲಕರಣೆಗಳು ಮತ್ತು ಬೀಜಗಳು, ನೀರಾವರಿ ಸೌಕರ್ಯ ಇತ್ಯಾದಿಗಳ ಉಪಯೋಗದಿಂದ ಭೂಮಿಯ ಉತ್ಪಾದನೆಯನ್ನು ಅಧಿಕಗೊಳಿಸಬಹುದು.

3 ಭೂಮಿ ಇಲ್ಲದ ರೈತರಿಗೆ ಸಹಕಾರಿ ಸಾಗುವಳಿ ಪದ್ಧತಿಯು ಉದ್ಯೋಗಾವಕಾಶಗಳನ್ನು ಕಲ್ಪಿಸುವುದರಿಂದ ಅವರು ಉತ್ಸಾಹದಿಂದ ದುಡಿಯುತ್ತಾರೆ.

4 ಸಾಗುವಳಿಯ ಭೂಮಿಯ ವಿಸ್ತಾರ ಹೆಚ್ಚಾಗಿರುವುದರಿಂದ ಎಲ್ಲಾ ಬಗೆಯ ಯಂತ್ರಗಳನ್ನೂ ಉಪಯೋಗಿಸಿ ಕೃಷಿಯನ್ನು ಯಾಂತ್ರೀಕೃತವನ್ನಾಗಿ ಮಾಡಬಹುದು. ಅಲ್ಲದೆ ಬಾವಿ, ಕೊಳವೆ ಬಾವಿ ಮುಂತಾದುವುಗಳ ಮೂಲಕ ಬೆಳೆಗೆ ನೀರಿನ ವ್ಯವಸ್ಥೆಯನ್ನು ತೃಪ್ತಿಕರವಾಗಿ ಪೂರೈಸಬಹುದು.

5 ಈ ಪದ್ಧತಿಯಲ್ಲಿ ಇರುವ ಸಲಕರಣೆಗಳನ್ನೇ ಲಾಭದಾಯಕವಾಗಿ ಉಪಯೋಗಿಸಬಹುದು.

6 ಸಹಕಾರಿ ಸಾಗುವಳಿಯು ಆರ್ಥಿಕ ಭದ್ರತೆಯನ್ನು ಕಲ್ಪಿಸಿಕೊಡುವುದಲ್ಲದೆ, ಕೃಷಿಯಲ್ಲಿ ಕಂಡುಬರುವ ಎಲ್ಲಾ ಬಗೆಯ ಅನಿಶ್ಚಿತತೆಗಳನ್ನು ನಿವಾರಣೆ ಮಾಡುತ್ತದೆ.

7 ಈ ಪದ್ಧತಿಯಲ್ಲಿ ಸಾಂದ್ರ ಬೇಸಾಯ, ಮಿಶ್ರ ಬೇಸಾಯ ಮತ್ತು ವಿವಿಧ ಬೆಳೆಗಳ ಯೋಜನೆಯನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ.

8 ಸಾಹುಕಾರರ ಶೋಷಣೆಯಿಂದ ರೈತರನ್ನು ದೂರವಿರಿಸುತ್ತದೆ. ಜೊತೆಗೆ ಈ ಪದ್ಧತಿಯು ಆರ್ಥಿಕ ಅಸಮಾನತೆಯನ್ನು ಕಡಿಮೆ ಮಾಡುತ್ತದೆ.

9 ಸಾಮಾಜಿಕ ಪ್ರಜ್ಞೆಯನ್ನೂ ರೈತರು ಬೆಳೆಸಿಕೊಳ್ಳುವಂತೆ ಮಾಡಿ ಅವರ ಕಾರ್ಯ ಚಟುವಟಿಕೆಗಳನ್ನು ಹೆಚ್ಚಿಸುತ್ತದೆ.

10 ಸಹಕಾರಿ ಸಾಗುವಳಿ ಪದ್ಧತಿಯಲ್ಲಿ ಸುಧಾರಿಸಿದ ಬೇಸಾಯವನ್ನು ಕೈಗೊಳ್ಳುವುದರಿಂದ ಭೂಮಿಯ ಉತ್ಪಾದನೆಯನ್ನು ಹೆಚ್ಚಿಸುವುದರೊಂದಿಗೆ ಎಕರೆವಾರು ಖರ್ಚುಗಳನ್ನೂ ಕಡಿಮೆಮಾಡಹುದು.

11 ಸಹಕಾರಿ ಸಾಗುವಳಿ ಉಳಿತಾಯದ ಶಕ್ತಿಯನ್ನು ಹೆಚ್ಚಿಸುವುದರ ಮೂಲಕ ಬಂಡವಾಳವನ್ನು ಅಧಿಕಗೊಳಿಸುತ್ತದೆ.

12 ಹಲವಾರು ಜನ ಒಟ್ಟಿಗೆ ಸೇರಿ ಸಾಗುವಳಿ ಮಾಡುವುದರಿಂದ ದೈಹಿಕಬಲ ಹೆಚ್ಚಿ ಯಾರೊಬ್ಬರಿಗೂ ಹೆಚ್ಚಿನ ಶ್ರಮವಿಲ್ಲದೆ ಕೆಲಸ ಸುಗಮವಾಗಿ ನಡೆಯುತ್ತದೆ. ಅಲ್ಲದೆ ಪರಸ್ಪರ ಸಹಾಯಬುದ್ಧಿ, ಸಹಾನುಭೂತಿ, ಪ್ರೀತಿ, ಸೌಹಾರ್ದತೆ, ಸೇವಾ ಭಾವನೆ, ಕರ್ತವ್ಯ, ಕರುಣೆ ಮುಂತಾದ ಸದ್ಗುಣಗಳು ಅವರಲ್ಲಿ ಬೇರುಬಿಡುವುವು.

13 ಈ ಪದ್ಧತಿಯಲ್ಲಿ ಯಾರೊಬ್ಬರ ಲಾಭವೂ ಮುಖ್ಯವಲ್ಲ. ಸಮಾನ ಹಂಚಿಕೆಯೇ ಇದರ ಮುಖ್ಯ ಧ್ಯೇಯ.

14 ರೈತರನ್ನು ಸಹಕಾರಿ ಸಂಸ್ಥೆಯ ಸದಸ್ಯರಾಗಲು ಯಾರೂ ಒತ್ತಾಯ ಮಾಡುವುದಿಲ್ಲ. ಅವರಿಗೆ ಲಾಭದಾಯಕವೆಂದು ತೋರಿಬಂದರೆ ಮಾತ್ರ ಸದಸ್ಯರಾಗಬಹುದು. ಸದಸ್ಯರಾದನಂತರ ಇಷ್ಟವಿಲ್ಲದಿದ್ದಲ್ಲಿ ತಮ್ಮ ಭೂಮಿಯನ್ನು ಹಿಂದಕ್ಕೆ ಪಡೆಯಬಹುದು.

**ಭಾರತದಲ್ಲಿ ಸಹಕಾರಿ ಸಾಗುವಳಿ ಹಿನ್ನಡೆಗೆ ಕಾರಣಗಳು:**

ಸಹಕಾರಿ ಸಾಗುವಳಿಯಿಂದ ಮೇರೆಮೀರಿದ ಅನುಕೂಲತೆಗಳಿದ್ದರೂ, ಭಾರತದಲ್ಲಿ ಈ ಪದ್ಧತಿ ಹೆಚ್ಚು ಜನಪ್ರಿಯವಾಗಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ.



1 ರೈತ ತನ್ನ ಹಿಡಿತದಲ್ಲಿರುವ ಭೂಮಿಯನ್ನು ಸಹಕಾರಿ ಸಾಗುವಳಿ ಸಂಸ್ಥೆಗೆ ಒಪ್ಪಿಸಲು ಇಷ್ಟಪಡುವುದಿಲ್ಲ. ಏಕೆಂದರೆ, ಅವನ ಬದುಕಿನ ಸರ್ವಸ್ವವಾಗಿರುವ, ಅವನ ಜೀವನದ ಯಾವ ತುರ್ತು ಪರಿಸ್ಥಿತಿಯಲ್ಲಾದರೂ ಅವನಿಗೆ ಏಕಮಾತ್ರ ರಕ್ಷಣೆಯಾಗಿರುವ, ಜೀವನೋಪಾಯದ ಮುಖ್ಯ ಆಸರೆಯಾಗಿರುವ ಭೂತಾಯಿಯನ್ನು ಇನ್ನೊಬ್ಬರ ವಶಕ್ಕೆ ಒಪ್ಪಿಸಲು ಅವನು ಹಿಂತೆಗೆಯುತ್ತಾನೆ.

2 ಸಹಕಾರಿ ಸಾಗುವಳಿಯು ಸ್ವಪ್ರೇರಣೆಯಿಂದ ಕೂಡಿರಬೇಕು. ಅದರಲ್ಲಿ ಯಾರೊಬ್ಬರ ಒತ್ತಾಯವೂ ಇರಕೂಡದು. ಆದರೆ ನಮ್ಮ ದೇಶದಲ್ಲಿ ಎಲ್ಲಾ ರೈತರೂ ಸ್ವಪ್ರೇರಣೆಯಿಂದ ಒಟ್ಟಿಗೆ ಸೇರುವುದಿಲ್ಲ. ಇದರಿಂದಾಗಿ ಸಹಕಾರಿ ಸಾಗುವಳಿ ಸಂಸ್ಥೆಯನ್ನು ಸ್ಥಾಪಿಸುವುದು ಸುಲಭವಾಗುತ್ತಿಲ್ಲ.

3 ಈಗ ಇರುವ ಸಹಕಾರಿ ಸಂಸ್ಥೆಗಳಿಂದ ಹೆಚ್ಚು ಇಳುವರಿಯನ್ನು ಪಡೆಯುವುದು ಸಾಧ್ಯವಾಗುತ್ತಿಲ್ಲ. ಸಣ್ಣರೈತರ ಕೃಷಿ ಕಾರ್ಯಕ್ಕಿಂತಲೂ ಈ ಸಂಸ್ಥೆಗಳ ಕಾರ್ಯದಕ್ಷತೆ ಉತ್ತಮ ಮಟ್ಟದಲ್ಲಿರಬೇಕಾದ್ದು ಅಗತ್ಯ. ಏಕೆಂದರೆ, ಇವುಗಳ ಕಾರ್ಯದಕ್ಷತೆಯ ಬಗ್ಗೆ ಸಂಪೂರ್ಣ ನಂಬಿಕೆ ಉಂಟಾದಲ್ಲಿ ಮಾತ್ರ ರೈತ ತನ್ನ ಭೂಮಿಯ ಭವಿಷ್ಯವನ್ನು ಸಂಸ್ಥೆಗೆ ಸ್ವಪ್ರೇರಣೆಯಿಂದ ಒಪ್ಪಿಸಬಲ್ಲನು.

4 ಸಹಕಾರ ಸಾಗುವಳಿ ಬಹಳ ದೊಡ್ಡಮಟ್ಟದ ಸಹಕಾರ ಕಾರ್ಯ. ಆದ್ದರಿಂದ ಇದು ಸಾಧ್ಯವಾಗಬೇಕಾದರೆ ಸಹಕಾರದ ಉಳಿದ ಅಂಶಗಳಾದ ಸಹಕಾರಿ ಸಾಲ, ಸಹಕಾರಿ ಮಾರಾಟ, ಸೇವಾ ಸಹಕಾರ ಇತ್ಯಾದಿಗಳು ಸಾಕಷ್ಟು ಅಭಿವೃದ್ಧಿ ಹೊಂದಬೇಕು. ಸದ್ಯದ ಪರಿಸ್ಥಿತಿಯನ್ನು ಗಮನಿಸಿದರೆ ಸಹಕಾರ ಪದ್ಧತಿಯ ಬೆಳವಣಿಗೆ ಅಷ್ಟೊಂದು ಆಶಾದಾಯಕವಾಗಿ ಕಾಣುವುದಿಲ್ಲ.

ಈ ಎಲ್ಲಾ ಕಾರಣಗಳಿಂದಾಗಿ ನಮ್ಮ ದೇಶದಲ್ಲಿ ಸಹಕಾರಿ ಸಾಗುವಳಿಯ ಬೆಳವಣಿಗೆ ಕುಂಠಿತಗೊಂಡಿದೆ. ಇತ್ತೀಚೆಗೆ ಪಂಚವಾರ್ಷಿಕ ಯೋಜನೆಗಳಲ್ಲಿ ಭಿನ್ನ ಭಿನ್ನ ಹಿಡುವಳಿಗಳನ್ನು ಸಂಘಟಿಸಿ ಕೃಷಿಯನ್ನು ಲಾಭದಾಯಕವನ್ನಾಗಿ ಮಾಡುವ ದೃಷ್ಟಿಯಿಂದ ಸಹಕಾರಿ ಸಾಗುವಳಿ ಕೇಂದ್ರಗಳ ಉದ್ಯಮಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಡಲಾಗುತ್ತಿದೆ. ಇದರ ಮುಖ್ಯ ಉದ್ದೇಶ ದೇಶದಲ್ಲಿನ ನಿರ್ಗತಿಕ ಅಥವಾ ಅನಾಥ ಭೂಹೀನರ ಹಾಗೂ ಚಿಕ್ಕಪುಟ್ಟ ಭೂಹಿಡುವಳಿದಾರರ ಉದ್ಧಾರ. ನಮ್ಮ ದೇಶದಲ್ಲಿ ಚಿಕ್ಕ-ಪುಟ್ಟ ಹಿಡುವಳಿದಾರರ ಸಂಖ್ಯೆ ಅತಿ ಹೆಚ್ಚಿನ ಮಟ್ಟದಲ್ಲಿದೆ. ಸಾಗುವಳಿಯ ಪ್ರಾರಂಭದಲ್ಲಿ ಬೇಕಾಗುವ ಹೆಚ್ಚಿನ ಬಂಡವಾಳವನ್ನು ಪೂರೈಸಲು ಇವರೆಲ್ಲರೂ ಅಶಕ್ತರು. ಈ ದಿಸೆಯಲ್ಲಿ ದೃಷ್ಟಿ ಹರಿಸಿದರೆ ಸಹಕಾರಿ ಸಾಗುವಳಿಯ ಮಹತ್ವ ಅತಿ

ಹೆಚ್ಚಿನದು. ಆದ್ದರಿಂದ ಸಹಕಾರಿ ಸಾಗುವಳಿ ಸಂಸ್ಥೆಗಳ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗಲು ದಕ್ಷರಾದ, ಪ್ರಾಮಾಣಿಕರಾದ, ಶ್ರದ್ಧೆವಹಿಸಿ ದುಡಿಯುವಂತಹ ಮುಂದಾಳುಗಳು ಬೇಕು. ಆದರೆ ಭಾರತದಲ್ಲಿ ಇಂತಹವರು ವಿರಳ. ಆದ್ದರಿಂದ ಆಡಳಿತ ವರ್ಗವನ್ನು ತರಬೇತಿಯ ಮೂಲಕ ತಯಾರಿಸಬೇಕು. ಒಳ್ಳೆಯ ಶಿಕ್ಷಣದ ಮೂಲಕ ರೈತರನ್ನು ಪ್ರೋತ್ಸಾಹಿಸಿ, ಸ್ವಯಂ ಪ್ರೇರಣೆಯಿಂದ ಅವರು ಸಹಕಾರಿ ಸಾಗುವಳಿ ಸಂಸ್ಥೆಗಳನ್ನು ಸ್ಥಾಪಿಸುವಂತೆ ಮಾಡಬೇಕು. ಚಿತ್ರ ಪ್ರದರ್ಶನಗಳ ಮೂಲಕ ಸಹಕಾರಿ ಸಾಗುವಳಿಯ ಮಹತ್ವವನ್ನು ರೈತರಿಗೆ ಮನದಟ್ಟು ಮಾಡಿಕೊಡಬೇಕು ರೈತರಲ್ಲಿ ಜಾಗೃತಿ, ಮುಂದಾಳುತನದ ಮನೋಭಾವ ಬೆಳೆದಂತೆ ಕ್ರಮೇಣ ಈ ರಚನಾತ್ಮಕ ಕಾರ್ಯಕ್ರಮದ ಪ್ರಗತಿಯಾಗುವುದರಲ್ಲಿ ಸಂಶಯವಿಲ್ಲ. ರೈತರ ಶ್ರಮಕ್ಕೆ ತಕ್ಕ ಫಲ ದೊರಕಿಸುವಲ್ಲಿ ಸಹಕಾರಿ ಸಾಗುವಳಿ ಪದ್ಧತಿಯು ಒಂದು ಪರಿಣಾಮಕಾರಿ ಸಾಧನವಾಗಿದೆ. ಈ ಪದ್ಧತಿಯು ನಮ್ಮ ದೇಶದಲ್ಲಿ ಜನಪ್ರಿಯವಾದಲ್ಲಿ ರಾಷ್ಟ್ರ ಸಮೃದ್ಧವಾಗುವುದು ಖಂಡಿತ. ಬದುಕಿಗೆ ನೆಲೆಯೇ ಇಲ್ಲದ ನೂರಾರು ಜೀವಿಗಳಿಗೆ ಸಹಕಾರಿ ಸಾಗುವಳಿ ಆಶ್ರಯ ಕೊಡುತ್ತದೆ ಎಂಬುದನ್ನು ನಾನೆಂದಿಗೂ ಮರೆಯಲಾಗದು. ಜೊತೆಯಲ್ಲಿ ಕೃಷಿ ಅಭಿವೃದ್ಧಿಗೂ ಹೆಚ್ಚಿನ ಮಟ್ಟದಲ್ಲಿ ನೆರವಾಗುತ್ತದೆ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳುವುದಗತ್ಯ. ಇಂತಹ ಒಂದು ರಾಷ್ಟ್ರ ರಚನೆಯ ಕಾರ್ಯಕ್ರಮಕ್ಕೆ ಪ್ರತಿಯೊಬ್ಬ ರೈತರೂ ತಮ್ಮ ಸಹಕಾರವನ್ನು ನೀಡಬೇಕು. ರೈತರ ಸಹಕಾರವೇ ಸಹಕಾರಿ ಸಾಗುವಳಿಯ ಬೆನ್ನೆಲುಬು. ಸಹಕಾರಿ ಸಾಗುವಳಿ ಪದ್ಧತಿಯ ಏಳಿಗೆಯೇ ಹಳ್ಳಿಯ ಏಳಿಗೆ

॥ ಓಂ ಗುರುಬಸವಲಿಂಗಾಯ ನಮಃ ॥

## ಕೃತಜ್ಞತೆಗಳು

ಆತ್ಮೀಯ ಬಂಧುಗಳೇ,

ತಾ॥ 24-10-85 ರಿಂದ 30-10.85 ರವರೆಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ, ಚಿತ್ರರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ ಇಲಕಲ್ಲ ಅವರ ಶರಣ ಸಿದ್ಧಾಂತ ವಿದ್ಯಾ ಪೀಠದ 8 ನೆಯ ಶಿವಾನುಭವ ತರಬೇತಿ ಶಿಬಿರ ಮತ್ತು ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭದಲ್ಲಿ ಹೃತ್ಪೂರ್ವಕಾಗಿ ಸೇವೆ ಸಲ್ಲಿಸಿ, ಶ್ರೀ ಮಠದ ಕೀರ್ತಿಗೆ ಕಾರಣರಾಗಿ, ಶಿಬಿರ ಹಾಗೂ ಸಮಾರಂಭಗಳ ಯಶಸ್ಸಿಗೆ ಶ್ರಮಿಸಿದ ತಮಗೆ ತುಂಬು ಹೃದಯದ ಶರಣಾರ್ಥಿಗಳನ್ನು ಅರ್ಪಿಸಲು ಸಂತೋಷಿಸುತ್ತೇನೆ.

5-11-85

ಸಂಚಾಲಕ

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ದಿನಾಂಕ 20-4-85 ರಂದು ಹಾಲ್ಲೂರು ಬಸವ ಜಯಂತಿಗೆ ತನ್ನನ್ನು
ಅರ್ಪಿಸಿಕೊಂಡಿತು. ಗ್ರಾಮೀಣ ಬಂಧುಗಳು ಭಕ್ತಿ ಶ್ರದ್ಧೆಗಳಿಂದ ಪರಮ ಪೂಜ್ಯ
ಶ್ರೀ ಶ್ರೀ ಗೌರಿಶಂಕರ ಸ್ವಾಮಿಗಳನ್ನು ಸಮಾರಂಭಕ್ಕೆ ಸ್ವಾಗತಿಸಿದರು. ಜಯಂತಿಯ
ಮೊದಲನೆಯ ಅಧಿವೇಶನದಲ್ಲಿ ಶ್ರೀ ಭಾಸ್ಕರಾಚಾರ್‌ರವರು ಉಪನ್ಯಾಸ ಮಾಡಿದ
ನಂತರ ಪೂಜ್ಯ ಗೌರಿಶಂಕರ ಸ್ವಾಮಿಗಳವರು ಆಶೀರ್ವಚನ ಮಾಡಿದರು. ದ್ವಿತೀಯ
ಅಧಿವೇಶನದಲ್ಲಿ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.
ಜನಪದ ಗೀತೆಗಳಲ್ಲಿ ವ್ಯಕ್ತವಾಗಿರುವ ಬಸವಣ್ಣನವರ ಹೃದಯಸ್ಪರ್ಶಿ ರಸಚಿತ್ರವನ್ನು
ಸುಂದರವಾಗಿ ನಿರೂಪಿಸಿದರು.

ಜೀವನದ ಎಲ್ಲ ಅಂಗಗಳನ್ನು ಪರಿಶೀಲಿಸಿ ಸೇವಾ ಜೀವನ ಕೈಗೊಂಡ ವ್ಯಕ್ತಿ
ಶ್ರೇಷ್ಠರು ಬಸವಣ್ಣ. ನಮಗೆ ನಂಬಿಕೆಯಿಲ್ಲ, ಶ್ರದ್ಧೆಯಿಲ್ಲ, ಭಕ್ತಿಯಿಲ್ಲ, ಕಾಯಕ
ನಿಷ್ಠೆಯಿಲ್ಲ, ಕಾಯಕವೇ ಕೈಲಾಸ ಎಂಬುದು ಭಾವಪೂರ್ಣ ಮಂತ್ರ, ಅರ್ಥಪೂರ್ಣ
ಸೂತ್ರ, ಪರಿಣಾಮದಾಯಕ ಸೂಕ್ತಿ. ವ್ಯಕ್ತಿ ಕ್ರಿಯಾಶೀಲನಾಗಬೇಕೆಂಬುದೇ
ಬಸವಣ್ಣನವರ ಆಶಯ. ಇದಕ್ಕೆ ತಪ್ಪಿ ನಡೆದರೆ ದೈವದ್ರೋಹ, ಆತ್ಮದ್ರೋಹ, ದೇಶ
ದ್ರೋಹ, ಧರ್ಮದ್ರೋಹ, ಬಸವಣ್ಣನವರು ಹೆಚ್ಚು ವರ್ಷ ಬದುಕಿದ್ದರೆ ಬೇರೆಯೇ
ಭರತಖಂಡ ಕಾಣುತ್ತಿದ್ದೆವು. ಆ ಮಹಾನುಭಾವರನ್ನು ಅಭ್ಯಾಸ ಮಾಡಿದಷ್ಟು ಅವರ
ಎತ್ತರ-ಬಿತ್ತರಗಳು ನಮಗೆ ಅರ್ಥವಾಗುತ್ತದೆ"-ಎಂಬುದಾಗಿ ಪರಮ ಪೂಜ್ಯ ಶ್ರೀ
ಶ್ರೀಗಳು ಆಶೀರ್ವಚನ ಮಾಡಿದರು.

ರಾತ್ರಿ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನವಾಯಿತು. ಇಪ್ಪತ್ತು
ಸಹಸ್ರ ಜನ ನಾಟಕ ನೋಡಿ ಆನಂದಿಸಿದರು. "ಅಕ್ಷರ ತಿಳಿಯದ ಹಳ್ಳಿಗಳಿಗೆ ಬಸವಣ್ಣ
ನವರ ಜೀವನವನ್ನು ಶ್ರೀ ಶ್ರೀಗಳವರು ಪರಿಚಯ ಮಾಡಿಕೊಡುತ್ತಿರುವ ವಿಶಿಷ್ಟ
ಮಾಧ್ಯಮ ನಾಟಕ"-ಎಂದು ಬೆಂಗಳೂರಿನಿಂದ ಬಂದಿದ್ದ ಶ್ರೀ ಶ್ರೀಗಳೊಬ್ಬರು ಹೇಳಿ
ದರು.

ತುಮಕೂರು ವೀರಶೈವ ಧರ್ಮ, ಸಂಸ್ಕೃತಿಯ ಗಂಧದ ಭರಣಿ. ಅಲ್ಲಿ ಪ್ರತಿ
ವರ್ಷ ಬಸವಣ್ಣನವರ ನಾಟಕ ನಡೆಯಲೇಬೇಕು. ಸಮಾಜ ಬಂಧುಗಳ ಅಭಿಮಾನ
ದೊಡ್ಡದು. ದಿನಾಂಕ 22-4-85 ರಂದು ನಾಟಕ "ಜಗಜ್ಯೋತಿ ಬಸವಣ್ಣ"

ಸಿದ್ಧಿ ವಿನಾಯಕ ಮಂಟಪದಲ್ಲಿ ಪ್ರದರ್ಶಿತವಾದಾಗ ಅಪಾರ ಸಂಖ್ಯೆಯ ಪ್ರೇಕ್ಷಕರಿಗೆ ಅದೊಂದು ಯಕ್ಷ ಲೋಕವಾಗಿ ಕಾಣಬಂದಿತು.

ನಿಟ್ಟೂರಿನ ಮಗ್ಗುಲಿಗೇ ಬಂಡಿಹಳ್ಳಿ, ತೆಂಗು ಅಡಿಕೆಗಳ ತೊಟ್ಟಿಲು. ಶರಣ ಬಂಧುಗಳೇ ಗ್ರಾಮದ ತುಂಬಾ. ಬಸವ ಜಯಂತಿ ನಡೆಯಿತು ಅಲ್ಲಿ 25-4-85 ರಂದು. ಜೊತೆಗೆ ಶ್ರೀ ಗುರು ಬಸವಣ್ಣನ ವಿವಾಹ ಸಂಭ್ರಮ, ಸಡಗರ, ಮದುವೆ ಮಂಟಪ ಶಿವಾನುಭವ ಮಂಟಪವಾಗಿ ಮಾರ್ಪಾಡಾಯಿತು. ಪರಮ ಪೂಜ್ಯರ ಅಧ್ಯಕ್ಷತೆಯಲ್ಲಿ ಬೆಟ್ಟದಹಳ್ಳಿ ಗವಿ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಚಂದ್ರಶೇಖರ ಸ್ವಾಮಿಗಳು ಉಪನ್ಯಾಸ ಮಾಡಿದರು. ಕೊಳ್ಳೇಗಾಲದ ಶ್ರೀ ಪಿ. ಬಸವಣ್ಣನವರು "ಉಪಕಾರ ಸ್ಮರಣೆ ಮಾನವೀಯತೆಯ ಹೆಗ್ಗುರುತು" ಬಸವಣ್ಣನವರಿಂದ ಆಗಿರುವ ಮಹೋಪಕಾರವನ್ನು ನಾವು ಎಂದೆಂದೂ ಮರೆಯದೆ ಜೀವಿಸಬೇಕು ಎಂದು ನುಡಿದರು ಮತ್ತು ಡಾ|| ಹೆಚ್. ತಿಪ್ಪೇರುದ್ರ ಸ್ವಾಮಿಯವರು ಬರೆದಿರುವ "ಕರ್ತಾರನ ಕಮ್ಮಟ" ಬಸವಣ್ಣನವರ ಜೀವನವನ್ನು ಸುಂದರವಾಗಿ ಚಿತ್ರಿಸಿರುವ ಕಾದಂಬರಿ. ಅದರ ಸುಲಭದ ಬೆಲೆಯ ಆವೃತ್ತಿ ಬರುವಂತೆ ಪ್ರಯತ್ನ ಮಾಡಬೇಕು, ಮನೆಮನೆಗೆ ಆ ಗ್ರಂಥ ಮುಟ್ಟುವಂತಾಗಬೇಕು ಎಂದು ಪ್ರಾರ್ಥನೆ ಇಟ್ಟರು ಸಭೆಗೆ. ಶ್ರೀ ಹೆಚ್. ವಿ. ವೀರಭದ್ರಯ್ಯನವರು ಮಾತನಾಡುತ್ತ, ಹಳ್ಳಿಯ ಹೆಣ್ಣುಮಕ್ಕಳ ಹಾಡಿನಲ್ಲಿ ಬಸವಣ್ಣನವರು ನಿಚ್ಚಳವಾಗಿ ಮೂಡಿಬಂದಿದ್ದಾರೆ–ಎಂದು ನುಡಿದರು.

ಪೂಜ್ಯ ಶ್ರೀ ಶ್ರೀ ಸಿದ್ಧರಾಮ ದೇಶಿಕೇಂದ್ರ ಸ್ವಾಮಿಗಳು ಉಪನ್ಯಾಸ ಮಾಡಿದರು. "ಧರ್ಮವನ್ನು ಶೋಕಿಗಾಗಿ. ಕಂದಾಚಾರಕ್ಕಾಗಿ ಆಚರಿಸುವ ಪ್ರವೃತ್ತಿ ಹೋಗಬೇಕು. ಭೌತಿಕ ತೊಂದರೆಗಳಿಗೆ ನೈತಿಕ ಮೌಲ್ಯಗಳೇ ಪರಿಹಾರ. ರಾಮಕೃಷ್ಣ ಪರಮಹಂಸರು, ವಿವೇಕಾನಂದರು, ಅರವಿಂದರು, ರಮಣ ಮಹರ್ಷಿಗಳು, ಗಾಂಧೀಜಿಯವರು ಮಹಾ ಸುಧಾರಣೆಯನ್ನು ಮಾಡಿದರೂ ಸಹ ಒಬ್ಬ ಮಾದಾರ ಚೆನ್ನಯ್ಯನನ್ನು ರೂಪಿಸಲು ಆಗಲಿಲ್ಲ. ಅದೂ 185 ವರ್ಷಗಳ ದೀರ್ಘಾವಧಿಯಲ್ಲಿ. ಆದರೆ ಬಸವಣ್ಣ ಕೇವಲ 36 ವರ್ಷಗಳ ಅಲ್ಪಾವಧಿಯಲ್ಲಿ ಅಂಥ ಅದ್ಭುತವಾದ ಒಂದು ತಂಡವನ್ನೇ ನಿರ್ಮಾಣ ಮಾಡಿದರು. ಧರ್ಮ ಅಫೀಮಲ್ಲ, ಗೊಡ್ಡು ತತ್ವವಲ್ಲ, ಹೇಡಿಗಳ ವೇದವಲ್ಲ, ಅದು ಸಾವನ್ನು ಗೆಲ್ಲಲಿರುವ ದಿವ್ಯ ಔಷಧಿ"–ಎಂಬುದಾಗಿ ಶ್ರೀ ವಿ ವಿ. ಸಂಗಮದ ಅವರು ಉಪನ್ಯಾಸ ಮಾಡಿದರು. ಮತ್ತೊಬ್ಬ ಉಪನ್ಯಾಸಕರಾದ ಶ್ರೀ ಭಾಸ್ಕರಾಚಾರ್ ಅವರು ಮಾತಿಲ್ಲದವರಿಗೆ ಮಾತಾಗಿ, ದನಿಯಿಲ್ಲದವರಿಗೆ ದನಿಯಾಗಿ ಬಂದರು ಬಸವಣ್ಣ ಎಂದರು.

"ಬಸವಣ್ಣನವರ ಎತ್ತರಕ್ಕೆ ಯಾರೂ ಬರಲಿಲ್ಲ. ವೀರಶೈವಧರ್ಮ, ಕ್ರೈಸ್ತ ಧರ್ಮ, ಇಸ್ಲಾಂ ಧರ್ಮಗಳ ಮಹತ್ತನ್ನೂ ಮೀರಿ ಬೆಳೆದಂಥ ಧರ್ಮ. ಬಸವಣ್ಣ



ಒಂದು ಮಹಾಸಾಗರ. ಅವರು ತೋರಿಸಿದ ಗುರುಲಿಂಗ ಜಂಗಮರು ವಿಶ್ವದ ಮಹೋನ್ನತ ಕಲಶಗಳು. Guru is a teacher, Linga is an education, Jangama is a master. ಎಂದು ಅನುಗ್ರಹ ಭಾಷಣ ಮಾಡುತ್ತ ಪರಮ ಪೂಜ್ಯ ಶ್ರೀ ಶ್ರಿಗಳು 'Linga is a spiritral container' ಎಂದು ಆಶೀರ್ವದಿಸಿದರು.

ಜಗಜ್ಯೋತಿ ಬಸವೇಶ್ವರ ನಾಟಕ ರಾತ್ರಿ, ಹತ್ತು ಗಂಟೆಗೆ ಪ್ರಾರಂಭವಾಗಿ ಮುಂಗೋಳಿ ಕೂಗುವವರೆಗೆ ನಡೆಯಿತು. 'ಮಾರಿಗುಡಿ ತುಂಬಾ ಚೆನ್ನಾಗಿತ್ತಲ್ವ' ಎಂದು ನಿಟ್ಟೂರಿನ ನಂಜಯ್ಯನೆಂಬಾಗ ಅಮ್ಮನಹಳ್ಳಿ ಪಾಳ್ಯದ ಶಿವಣ್ಣ ಅನುಭವ ಮಂಟಪ ಕಲ್ಯಾಣ ಕಂಡಂತಾಯ್ತು ಎನ್ನುತ್ತಿದ್ದರು.

ಸಂಕಲಾಪುರ ಹಾಸನಜಿಲ್ಲೆಯ ಒಂದು ಪುಣ್ಯ ಗ್ರಾಮ ಮಲೆನಾಡು ಊರೆಂದರೊಂದೆ ಮನೆ ಅತ್ತಕಡೆ. ಅಲ್ಲೊಂದು ಮಠ ಶಾಂತಮಲ್ಲೇಶನ ಶ್ರೀ ಗದ್ದುಗೆ, ಅದೂ ಜಾಗೃತಸ್ಥಾನ. ಮಠದ ಸದ್ಯದ ಸ್ವಾಮಿಗಳು ಪೂಜ್ಯ ಶ್ರೀ ಶ್ರೀ ಧರ್ಮರಾಜೇಂದ್ರ ಸ್ವಾಮಿಗಳು. ಮೂರ್ತಿ ಚಿಕ್ಕದು ಕೀರ್ತಿ ಎತ್ತರದ್ದು ಪಾದರಸದಂಥ ಕ್ರಿಯಾಶಕ್ತಿ. ಅವರ ನೇತೃತ್ವ ಶ್ರೀ ಪರಮಣ್ಣಗೌಡರು ಮತ್ತು ಬಂಧುಗಳ ಮುಖಂಡತ್ವ ಅಲ್ಲಿ ಬಸವ ಜಯಂತಿ. ಅದೂ ಅದ್ದೂರಿಯಾಗಿ ಗಿಡಮರಗಳಿಗೆಲ್ಲಿ ಬಸವ ವಚನಾಮೃತದ ವರ್ಷಧಾರೆ. 28-4-85 ರಂದು ಬಸವ ಜಯಂತಿ ಸಂಕಲಾಪುರ ಮಠದ ಹೆಮ್ಮೆಯ ಕಾರ್ಯಕ್ರಮವಾಗಿ ಮೂಡಿಬಂತು.

ರಾಜ್ಯದ ಕೃಷಿ ಸಚಿವರಾದ ಶ್ರೀ ಎಂ. ಪಿ. ಪ್ರಕಾಶ್‌ರವರು ಭಾಷಣ ಮಾಡುತ್ತ 'ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯ'–ರಾಜಕಾರಣಿಯಾದ ನನಗೂ ಬಸವ ಜಯಂತಿಗೂ ಎಂಥ ಸಂಬಂಧ ಎಂದು ಕೇಳಬಹುದು. ಆದರೆ ಅನ್ಯೋನ್ಯ ಸಂಬಂಧವಿದೆ, ಪರಿಶುದ್ಧ, ಪ್ರಾಮಾಣಿಕ, ಆದರ್ಶ ರಾಜಕಾರಣಿಯಾಗಿದ್ದ ಬಸವಣ್ಣನವರು ನಮಗಿಂದು ತುಂಬಾ ಅಗತ್ಯ. ಧಾರ್ಮಿಕ, ಭಾವನಾತ್ಮಕ ಸಂಬಂಧ ನನಗೂ ಈ ಜಯಂತಿಗೂ ಇದೆ. ಈ ಜಯಂತಿಯ ಆಚರಣೆ ವೈಜ್ಞಾನಿಕವಾಗಿ, ವೈಚಾರಿಕವಾಗಿ, ಆಂದೋಳನವನ್ನೇ ಉಂಟುಮಾಡಲಿ. ಕನ್ನಡದ ಮೊದಲ ಚಳುವಳಿಯಾಗಿ ವಚನಕಾರರು ಹೋರಾಡಿದರು. ಭಾಷೆ ಶೋಷಣೆಯ ಅಸ್ತ್ರವಾಗದಂತೆ, ಮನ ಅರಳುವ ಮಲ್ಲಿಗೆಯಂತೆ ಶರಣರು ಪರಿಶ್ರಮಿಸಿದರು–ದೇವಭಾಷೆ, ಆಡಳಿತಭಾಷೆ ನಮ್ಮನಿಂದು ನಿಸ್ಸತ್ವರನ್ನಾಗಿಸಿದೆ ಶರಣರ ದೃಷ್ಟಿಯಲ್ಲಿ ದೇವರ ಪರಿಕಲ್ಪನೆಯೇ ಭಿನ್ನವಾದುದು. ಅದು ಮೌಢ್ಯದ ಸಂಕೇತವಲ್ಲ, ಭ್ರಮೆಯ ಭಂಡಾರವಲ್ಲ. ಶುದ್ಧ "ಅರಿವು". ಅಷ್ಟಾವರಣಗಳ ಸಹಾಯದಿಂದ ಷಟ್‌ಸ್ಥಲಗಳನ್ನು ಸಾಧಿಸಬೇಕು. ದೇವರು, ಸ್ವರ್ಗ ಕಲ್ಪನೆಗಳೇ ಬೇರೆ ಅಣ್ಣನವರ ದೃಷ್ಟಿಯಲ್ಲಿ ಜಾತಿಯ ವಿರುದ್ಧ

ಹೋರಾಡಿದ ಬಸವಣ್ಣ. ವರ್ಗರಹಿತ ಸಮಾಜ ನಿರ್ಮಾಣ ಮಾಡಿದ ಪುಣ್ಯ ಅಣ್ಣನದು ಎಂದರು. "ಬಸವಣ್ಣನವರ ಎದುರಿಗೆ ಇಡೀ ವಿಶ್ವವೇ ಇತ್ತು. ಆತನ ಎದುರಿಗೆ ಇದ್ದುದು ಕೇವಲ ಕರ್ನಾಟಕವಲ್ಲ, ಭಾರತವಲ್ಲ, ವೀರಶೈವ ಸಮಾಜವಲ್ಲ, ಇಡೀ ಪ್ರಪಂಚ ಅಣ್ವಸ್ತ್ರಗಳ ಮಹಾ ಸಮರದಿಂದ ಪಾರಾಗಬೇಕಾದರೆ ನಮಗಿರುವ ಏಕೈಕ ದಾರಿ ಬಸವ ಸಂದೇಶ ಎಲ್ಲ ಹೊರದೇಶದಿಂದಲೇ ಬರಬೇಕೆಂಬ ಭ್ರಮೆಯಲ್ಲಿಂದು ನಾವು ಬಾಳುತ್ತಿದ್ದೇವೆ. ಇದು ಹೋಗಲಾಡಿಸುವ ಶಿಕ್ಷಣ ತರುಣ ಜನಾಂಗಕ್ಕಿಂದು ಅಗತ್ಯವಾಗಿದೆ. ಗಾಂಧೀಜಿ ಕಟ್ಟಬಯಸಿದ್ದು ಶಿಸ್ತುಬದ್ಧ ಸುಸಂಸ್ಕೃತ ರಾಷ್ಟ್ರವನ್ನು ಆದರೆ ಇಂದು ಆಗಿರುವುದು ಅದರ ವಿರುದ್ಧ ದೃಶ್ಯ. "The first son of the country must serve the last man of the country"–ಎಂಬುದಾಗಿ ಶ್ರೀ ವಿ. ವಿ. ಸಂಗಮದ ಉಪನ್ಯಾಸ ನೀಡಿದರು "ಬಸವಣ್ಣ ಬದುಕಿರುವುದು ಮಠಗಳಲ್ಲಲ್ಲ, ವಿಶ್ವವಿದ್ಯಾನಿಲಯಗಳಲ್ಲಲ್ಲ, ಬುದ್ಧಿಜೀವಿಗಳ ಉಪನ್ಯಾಸಗಳಲ್ಲಲ್ಲ, ಅವನು ಬದುಕಿರುವುದು ಹಳ್ಳಿಗಾಡಿನ ಗರತಿಯರ ಮುಗ್ಧ ಹೃದಯಗಳಲ್ಲಿ"–ಎಂಬುದಾಗಿ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಮಾತನಾಡಿದರು.

"ಪ್ರಪಂಚ ಒಂದು ಅಂಗಡಿ. ದೇವರು ವರ್ತಕ. ಮಾನವ ಗಿರಾಕಿ "ಕಾಣಿಯು ಗೆಲ್ಲ, ಅರ್ಧಗಾಣಿಯ ಸೋಲ" ಆ ದೇವರು ತುಂಬಾ ಕಟ್ಟುನಿಟ್ಟದ ವ್ಯಾಪಾರ ಆತನದು. ಕ್ರಿಯೆಗೆ ತಕ್ಕ ಫಲ ನಾವಿಂದು ಕ್ರಿಯಾಶೂನ್ಯರಾಗಿದ್ದೇವೆ. ದುಡಿಯಬೇಕೆಂಬ ಮನೋಧರ್ಮವೇ ಇಲ್ಲವಾಗುತ್ತದೆ. ಪರಾವಲಂಬಿಯಾದ ವ್ಯಕ್ತಿ, ಸಮಾಜ, ರಾಷ್ಟ್ರ ಬಹಳ ದಿನ ಬದುಕಲಾರದು. ಸಾಲ ತಂದು ದೇಶ ಸಾಕುತ್ತೇವೆ ಎಂಬ ಭ್ರಮೆ ದೂರಾಗಬೇಕು. ದೇಶ ನಿರ್ಮಾಣ ಕಾರ್ಯದಲ್ಲಿ ಇನ್ನೊಂದು ದೇಶದವರಿಂದ ನಾವು ಕಲಿಯುವುದು ಬೇಕಿಲ್ಲ. ನಮ್ಮ ಹಿರಿಯರು ತೋರಿಸಿದ ದಾರಿಯಲ್ಲಿ ನಡೆದರೆ ಸಾಕು. ದುಡಿದು ಉಣ್ಣು, ದುಡಿಮೆಯ ಫಲವನ್ನು ಹಂಚಿ ಉಣ್ಣು—ಎಂದು ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು.

ರಾತ್ರಿ ಹತ್ತು ಗಂಟೆಗೆ ಸರಿಯಾಗಿ ನಾಟಕ ಜಗಜ್ಯೋತಿ ಬಸವೇಶ್ವರ ಪ್ರಾರಂಭವಾಯಿತು. ಸಂಕಲಾಪುರದ ಸುತ್ತ ಹತ್ತು ಮೈಲಿಯಿಂದ ಪ್ರೇಕ್ಷಕರು ಬಂದಿದ್ದರು. ಮಠದ ಮುಂಭಾಗ ಜನಸ್ತೋಮದ ಮಹಾನೋಟವಾಗಿತ್ತು. ಧರ್ಮರಾಜೇಂದ್ರ ಸ್ವಾಮಿಗಳ ಸೇವಾಶ್ರಮ ಶಿವಸಾರ್ಥಕ್ಯ ಪಡೆದಿತ್ತು. ಅಕ್ಕಮಹಾದೇವಿಯ ಪಾತ್ರ ತುಂಬಾ ಮೆಚ್ಚಿಗೆ ಪಡೆಯಿತು. "ಎತ್ತೆತ್ತ ನೋಡಿದಡತ್ತತ್ತ ಬಸವನೆಂಬ ಬಳ್ಳಿ"—ಮಲೆನಾಡ ಬಂಧುಗಳ ಆತಿಥ್ಯವನ್ನು ಸವಿದಾಗ ನೆನಪಾಯಿತು.



2–5–85 ರಂದು ಮಲ್ಲಪ್ಪನಹಳ್ಳಿಯಲ್ಲಿ ಬಸವ ಜಯಂತಿ ನಡೆಯಿತು. ಶ್ರೀ ವಿ. ವಿ. ಸಂಗಮದ, ಶ್ರೀ ಕೆ. ಪಿ. ಶಿವಲಿಂಗಯ್ಯ ಅವರು ಉಪನ್ಯಾಸಕರಾಗಿ ಆಗಮಿಸಿದ್ದರು. ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ಮಾಡಿದರು.

ಜಗಜ್ಯೋತಿ ಬಸವಣ್ಣನವರ ನಾಟಕ ಅಭಿನಯಿಸಲಾಯಿತು. ಹದಿನೈದು ಸಾವಿರ ಜನ ನಾಟಕ ನೋಡಿ ಆನಂದಿಸಿದರು.

ಬಾಣಸಂದ್ರ ತುರುವೇಕೆರೆ ತಾಲ್ಲೂಕು 4–5–85 ರಂದು ಬಸವ ಜಯಂತಿಯನ್ನು ಆಚರಿಸಿದ ಪುಣ್ಯ ಗ್ರಾಮ. "ಚಂದ್ರೋದಯಕ್ಕೆ ಅಂಬುಧಿ ಹೆಚ್ಚಾಗುವುದಯ್ಯಾ, ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟತ್ತೆ"—ಅಣ್ಣನವರ ವಚನ. ಚಂದ್ರಗ್ರಹಣದಂದು ಬಾಣಸಂದ್ರದಲ್ಲಿ ಬಸವ ಜಯಂತಿ ನಡೆಯಿತು. ಅಪಾರ ಜನಸ್ತೋಮ ಬಸವೇಶ್ವರ ನಾಟಕಕ್ಕೆ ಬಂದಿದ್ದಿತು. ಎಂಬತ್ತನಾಲ್ಕು ಟ್ರಾಕ್ಟರ್‌ಗಳು ಶಿಸ್ತಿನ ಸಿಪಾಯಿಗಳಂತೆ ಜನತುಂಬಿ ತಂದಿದ್ದವು. ಎತ್ತಿನಗಾಡಿಗಳಿಗೆ ಲೆಕ್ಕವಿಡಲಾಗಲಿಲ್ಲ. ಶ್ರೀ ಕೆ. ಹೆಚ್. ರಾಮಕೃಷ್ಣಯ್ಯ, ಶಾಸಕರು, ತುಮಕೂರಿನ ನ್ಯಾಯವಾದಿ ಶ್ರೀ ಹೆಚ್. ಎಸ್ ರಾಜಶೇಖರ್, ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಸಿದ್ಧಗಂಗಾ ಮಠದ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೂ ಮತ್ತು ಪೂಜ್ಯ ಶ್ರೀ ಶ್ರೀ ಗೌರೀಶಂಕರ ಸ್ವಾಮಿಗಳೂ ಆಶೀರ್ವಚನ ನೀಡಿದರು. ಶಾಸಕ ಶ್ರೀ ಕೆ. ಹೆಚ್. ರಾಮಕೃಷ್ಣಯ್ಯನವರು ಮಾತನಾಡುತ್ತ "ಬಸವಣ್ಣ ವಿಶ್ವಮಾನವ ಅವರ ಪ್ರತಿಮೂರ್ತಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು, ಇಡೀ ಭಾರತದಲ್ಲಿ ಸಿದ್ಧಗಂಗಾ ಮಠ ಮೇಲ್ಮಟ್ಟದಲ್ಲಿರುವಂಥದು—ಎಂದು ಭಕ್ತಿ ನುಡಿಗಳನ್ನಾಡಿದರು. ಸಮಾರಂಭದ ಎಲ್ಲ ವ್ಯವಸ್ಥೆಗೆ ಕಾರಣರು ಶ್ರೀ ಪುಟ್ಟೇಗೌಡ ಮತ್ತು ಬಂಧುಗಳು.

ಶ್ರೀ ಸಿ. ಬಿ. ಶಾಸ್ತ್ರಿಯವರು ದೈವಭಕ್ತರು, ಗುರು ಜಂಗಮ ಪ್ರೇಮಿಗಳು, ಸಾತ್ವಿಕ ಸ್ವಭಾವದವರು. ಅವರ ಹುಟ್ಟೂರು ಬೆಳ್ಳಿ (ಬೆಳ್ಳಿಹಳ್ಳಿ) ಗುಬ್ಬಿ ತಾಲ್ಲೂಕು. 6–5–85 ರಂದು ಬಸವ ಜಯಂತಿ ಅಲ್ಲಿ ನಡೆಯಿತು. ಅವರಿಗೆ ಎಲ್ಲಲ್ಲದ ಉತ್ಸಾಹ. ಪರಮ ಪೂಜ್ಯರಿಗೆ ಭಕ್ತಿಪೂರ್ವಕ ಸ್ವಾಗತ. ಶ್ರೀ ಹೆಚ್. ವಿ. ವೀರಭದ್ರಯ್ಯನವರ ಉಪನ್ಯಾಸ. ಪರಮ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಚನ. ಅನಂತರ ರಾತ್ರಿ ನಾಟಕ ಪ್ರದರ್ಶನ. "ತನ್ನನ್ನು ತಾನು ಅರಿಯುವುದನ್ನು ಕಲಿಸಿಕೊಟ್ಟ ಕಲಾವಿದರು ಶರಣರು, ದಾಸೋಹಭಾವ ಜೀವನದ ಸಾರ್ಥಕತೆಯನ್ನು ತೋರಿಸುತ್ತದೆ"—ಎಂದು ಪರಮ ಪೂಜ್ಯರು ಆಶೀರ್ವಚನ ಮಾಡಿದಾಗ "ಶಾಸ್ತ್ರಿ"ಗಳವರ ಕಣ್ಣಲ್ಲಿ ನೀರು ಹರಿಯುತ್ತಿತ್ತು. ಶಾಸ್ತ್ರಿಗಳವರಿಗೆ ಬಲಗೈಯಾಗಿ ನಿಂತು ವ್ಯವಸ್ಥೆಯನ್ನು ನೋಡಿಕೊಂಡ ಯಶಸ್ಸು ಸಾಸಲು ನಂಜುಂಡಪ್ಪನವರಿಗ ಸಲ್ಲುತ್ತದೆ.

ನೆಲಮಂಗಲ ತಾಲ್ಲೂಕು ಬೆಟ್ಟಸಂದ್ರದಲ್ಲಿ 9-5-85 ರಂದು ಬಸವ ಜಯಂತಿ ಆಚರಿಸಲಾಯಿತು. ಶ್ರೀ ಬಿ. ಎಸ್. ಪರಮಶಿವಯ್ಯ ಮತ್ತು ಇತರ ಗ್ರಾಮೀಣ ಆಸ್ತಿಕ ಬಂಧುಗಳು ಒಳ್ಳೆಯ ಕಾರ್ಯಕ್ರಮಕ್ಕೆ ಕಾರಣರಾದರು. ರಾಜ್ಯದ ಸಂಪರ್ಕ ಮತ್ತು ಸಾರಿಗೆ ಸಚಿವರಾದ ಶ್ರೀ ಪಿ ಜಿ ಆರ್. ಸಿಂಧ್ಯ, ಡಾ॥ ಸಾ. ಶಿ. ಮರುಳಯ್ಯ, ಪ್ರೊ. ಜಿ. ಎಸ್. ಸಿದ್ದಲಿಂಗಯ್ಯ, ಶ್ರೀ ಷಣ್ಮುಖಯ್ಯ ಅಕ್ಕೂರಮಠ, ಶ್ರೀ ಹೆಚ್. ವಿ. ವೀರಭದ್ರಯ್ಯ, ಶಾಸಕ ಶ್ರೀ ಗುರುಪ್ರಸಾದ್ ಅವರುಗಳು ಗಣ್ಯ ಅತಿಥಿಗಳಾಗಿ ಆಗಮಿಸಿದ್ದರು.

"ದೇವರನ್ನು ಮಾನವ ಹೃದಯದಲ್ಲಿ ಕಂಡುಕೊಳ್ಳಬೇಕು" ಎಂದು ಡಾ॥ ಸಾ. ಶಿ. ಮರುಳಯ್ಯನವರೆಂದರೆ, ಅಕ್ಕೂರಮಠ ಅವರು "ಶೈವಧರ್ಮದ Cream ವೀರಶೈವ"-ಎಂದರು. ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು "ಹನ್ನೆರಡನೆಯ ಶತಮಾನ ಒಂದು ಅನ್ವೇಷಣೆಯ ಯುಗ" ಎಂದು ಕರೆದರು. "ಮಹಾಕಾರ್ಯದಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರು ತೊಡಗಿದ್ದಾರೆ. ಬಸವಣ್ಣನವರ ತತ್ವಗಳ ಪ್ರಚಾರ ಇಂದು ಅಗತ್ಯವಾಗಿ ಆಗಬೇಕಾಗಿದೆ, ಒಂದು ಗುಂಪಿಗೆ ಅದು ಸೀಮಿತವಾಗಬಾರದು" ಎಂದು ಸಚಿವ ಶ್ರೀ ಸಿಂಧ್ಯ ಹೇಳಿದರು.

ಪರಮ ಪೂಜ್ಯ ಶ್ರೀ ಶ್ರೀಗಳವರು "ಜನಶಕ್ತಿ ಕ್ರಿಯಾಶೀಲವಾಗದ ಹೊರತು ರಾಷ್ಟ್ರ ಕಲ್ಯಾಣವಾಗಲಾರದು. ಇಂದು ಎಲ್ಲೆಡೆಯಲ್ಲಿ ದ್ರೋಹದ ವಿಶ್ವರೂಪವೇ ನಡೆದಿದೆ. ಪ್ರಾಮಾಣಿಕತೆ, ನಿಸ್ವಾರ್ಥತೆಗಳಿಂದು ಕಾಣೆಯಾಗಿವೆ, ತಮ್ಮ ಮೌಲ್ಯಗಳನ್ನೇ ಕಳೆದುಕೊಳ್ಳುವಂತಾಗಿದೆ. ಇವೆಲ್ಲ ಮಾಯವಾಗಬೇಕು, ನಮ್ಮ ಹಿರಿಯ ಪರಂಪರೆಯನ್ನು ನೆನೆದು, ಬಸವಣ್ಣನವರಂಥ ಮಹಾನುಭಾವರ ಹಾದಿಯಲ್ಲಿ ನಡೆಯಬೇಕು. ಆಗ ರಾಷ್ಟ್ರ ಜೀವನ ಮಂಗಳಕರವಾದೀತು, ನಮ್ಮಲ್ಲಿ ಸಂಘಟನೆಯಿಲ್ಲ, ತತ್ವನಿಷ್ಠೆಯಿಲ್ಲ, ಅದು ಅಗತ್ಯವಾಗಿ ಇಂದು ಬೇಕಾಗಿದೆ"-ಎಂಬುದಾಗಿ ಅನುಗ್ರಹ ಭಾಷಣ ಮಾಡಿದರು.

ಜಗಜ್ಯೋತಿ ಬಸವಣ್ಣನವರ ನಾಟಕದ ಪ್ರದರ್ಶನಕ್ಕೆ ಕಿಕ್ಕಿರಿದ ಜನಸಂದಣಿ ಸೇರಿತ್ತು. ಮಂಗಳ ದೃಶ್ಯಾಂತದಲ್ಲಿ ಝುಂಬೆಳಗಿನ ಬೆಸೆಯಿಂದಾಗಿ ಬಸವಣ್ಣನವರ ಲಿಂಗೈಕ್ಯ ದೃಶ್ಯರಾಗರಂಜಿತವಾಗಿ ಕಾಣಬಂದಿತು. ಹಳ್ಳಿಯ ಮುಗ್ಧೆಯೊಬ್ಬಳು "ಅಯ್ಯೋ ನಮ್ಮಪ್ಪ ಹೋಗಿಬಿಟ್ಟೆಯಾ" ಎಂದು ಗದ್ಗದಿಸುತ್ತಿದ್ದಳು ಅದನ್ನು ಕಂಡು.

11-5-85 ರಂದು ಕಾಟೇನಹಳ್ಳಿ ತುಮಕೂರು ತಾಲ್ಲೂಕು ಬಸವ ಜಯಂತಿ ನಡೆಯಿತು. ಕೆಸ್ತೂರಿನ ಶರಣೆ ಗಿರಿಜಾದೇವಿ ನಂಜುಂಡಯ್ಯನವರು, ಹರಿಯಪ್ಪನಹಳ್ಳಿ

(58 ನೇ ಪುಟ ನೋಡಿ)



# ಸಿದ್ಧಗಂಗಾ ವಾರ್ತೆ

1. ತಾ॥ 24-10-85 ರಿಂದ 30-10-85 ರವರೆಗೆ ಶ್ರೀ ಕ್ಷೇತ್ರದಲ್ಲಿ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ, ಇಲಕಲ್ಲ ಅವರ ಶರಣ ಸಿದ್ಧಾಂತ ವಿದ್ಯಾಪೀಠದ 8ನೇ ಶಿವಾನುಭವ ತರಬೇತಿ ಶಿಬಿರ ನಡೆಯಿತು. 619 ಜನ ಶಿಬಿರಾರ್ಥಿಗಳು ಭಾಗವಹಿಸಿದ್ದರು. 30 ಜನ ಬೋಧಕರು ದಯಮಾಡಿಸಿದ್ದರು. ನೂರು ಮಂದಿ ಮಠಾಧೀಶರು ಪಾಲ್ಗೊಂಡಿದ್ದರು. ಸುಮಾರು ಮೂರು ಸಹಸ್ರ ಜನ ಶಿಬಿರದಲ್ಲಿ ದೀಕ್ಷಕರಾಗಿ ಸಮಾವೇಶಗೊಂಡಿದ್ದರು.

++ ++ ++

2. ತಾ॥ 26-10-85 ಮತ್ತು 27-10-85 ರಂದು ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭ ನಡೆಯಿತು. ಭಾರತದ ಮಾಜಿ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ ಡಾ॥ ಎಂ. ಎಸ್. ಕೃಷ್ಣಮೂರ್ತಿ, ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ, ಪ್ರೊ॥ ಟಿ. ಎಸ್. ಪಾಟೀಲ್, ಪ್ರೊ॥ ಸಿದ್ಧಣ್ಣ ಲಂಗೋಟಿ. ಪ್ರೊ॥ ಸಿ. ವಿ ಸಂಗಮದ, ಶ್ರೀಮತಿ ಕಲ್ಯಾಣಮ್ಮ ಲಂಗೋಟಿ. ಅವರು ವಿಶೇಷ ಉಪನ್ಯಾಸ ಮಾಡಿದರು. ಪರಮಪೂಜ್ಯ ಶ್ರೀ ಶ್ರೀಗವವರ ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ "ಲೋಕದ ಡೊಂಕು" "ಅಕ್ಕಮಹಾದೇವಿ" ಜಗಜ್ಯೋತಿ ಬಸವೇಶ್ವರ ನಾಟಕಗಳು ಪ್ರದರ್ಶಿತವಾದುವು.

++ ++ ++

3. ತಾ॥ 14-11-85 ರಂದು ಶ್ರೀ ಶಿವಕುಮಾರಸ್ವಾಮಿ ಗ್ರಾಮಾಂತರ ಪ್ರೌಢಶಾಲೆ ಬ್ಯಾಲಕೆರೆಯ, ಶಾಲಾ ಕಟ್ಟಡದ ಶಂಕುಸ್ಥಾಪನೆಯನ್ನು ಪರಮ ಶ್ರೀ ಶ್ರೀಗಳವರು ನೆರವೇರಿಸಿದರು. ವೈವಿಧ್ಯ ಪೂರ್ಣ ಸಮಾರಂಭವಾಗಿತ್ತು.

56 ನೇ ಪುಟದಿಂದ

ಶ್ರೀ ಶಿವಣ್ಣ, ಮತ್ತು ಶ್ರೀ ಹೆಚ್. ವಿ. ವೀರಭದ್ರಯ್ಯ ಬಸವಣ್ಣನವರನ್ನು ಕುರಿತು ಉಪನ್ಯಾಸ ಮಾಡಿದರು. ಊರೆಲ್ಲ ತಳಿರುತೋರಣ ಬಾಳೆಕಂಬಗಳಿಂದ, ಮಾವಿನ ಗೊಂಡೆಗಳಿಂದ ಅಲಂಕಾರಗೊಂಡಿತ್ತು.

"ಬಸವಣ್ಣನವರು ಹೇಳಿದ ಸಪ್ತಶೀಲಗಳು ವಿಶ್ವದ ಬೆಳಕಿನ ಸ್ತಂಭ ದೀಪಗಳು. ಮನುಷ್ಯ ಸೋಮಾರಿಯಾಗಿ ಕಾಲ ಕಳೆಯುವುದು ದೈವದ್ರೋಹ, ಧರ್ಮದ್ರೋಹ, ಆತ್ಮದ್ರೋಹ. ಬಸವಣ್ಣನವರ ದೃಷ್ಟಿಯಲ್ಲಿ ಯಾರೂ ನಿಕೃಷ್ಟರಲ್ಲ- ಎಂಬುದಾಗಿ ಪರಮಪೂಜ್ಯ ಶ್ರೀ ಶ್ರೀಗಳವರು ಉಪದೇಶ ಭಾಷಣ ಮಾಡಿದರು.

ನಾಟಕ "ಜಗಜ್ಯೋತಿ ಬಸವಣ್ಣ" ಪ್ರದರ್ಶಿತವಾಯಿತು. ಸುಮಾರು ಇಪ್ಪತ್ತೈದು ಸಾವಿರ ಪ್ರೇಕ್ಷಕರು ನಾಟಕ ನೋಡಿ ಸಂತೋಷಿಸಿದರು. "ನಾವು ಓದ್ ಬರದ ಮುಕ್ಕಗಳು ಸ್ವಾಮ್ಯೋರು ಆ ನಮ್ಮಪ್ಪನ ಕಥೇನಾ ನಾಟಕ ಮಾಡ್ಸಿ ತೋರ್ಸಿದ್ದಕ್ಕೆ ನಾವ್ ಏನ್ ಕೊಟ್ ತೀರ್ಸನಾ" ಎನ್ನುತ್ತಿದ್ದಳು ಹಣ್ಣು ಹಣ್ಣು ಮುದುಕಿಯೊಬ್ಬಳು. ರಾಜು ಸ್ವಾಮಿಗಳ ಕಾರು ನಡೆಸಿದಾಗ ದಾರಿಬಿಡುತ್ತಿದ್ದ ಜನ ಸಮೂಹದಲ್ಲಿ ಮುಗ್ಗರಿಸಿ ಬಿದ್ದ ಮಗುವೊಂದನ್ನು ಎತ್ತುತ್ತಿದ್ದರು. ●

---

(10ನೇ ಪುಟದಿಂದ) ಮಾಣಿಕ್ಯ ದೀಪ್ತಿ

ಎಂದು ಹೇಳಿ ಪ್ರಸಿದ್ಧರಾಗಬೇಕೆಂದು ಪರಿತಪಿಸುವವರಿಗೆ ಎಚ್ಚರಿಕೆಯನ್ನು ನೀಡಿದ್ದಾರೆ.

ಕೀರ್ತಿಯನ್ನು ಶನಿಗೆ ಹೋಲಿಸಿದ್ದಾರೆ. ಭಾರತೀಯ ಪರಿಕಲ್ಪನೆಯ ಪ್ರಕಾರ ಶನಿ ಒಬ್ಬ ದುಷ್ಟ ಗ್ರಹ. ಅವನ ವಕ್ರ ದೃಷ್ಟಿಗೆ ಬಿದ್ದವರು ಅನೇಕ ದುರಂತಗಳಿಗೆ ತುತ್ತಾಗುತ್ತಾರೆ. ಎಂಬ ನಂಬಿಕೆ; ತಲೆತಲಾಂತರದಿಂದ ಬೇರೂರಿರುವುದನ್ನು ಪುರೂರವ, ನಳಮಹಾರಾಜ, ವಿಕ್ರಮ ಮುಂತಾದವರ ಕಥೆಗಳಿಂದ ತಿಳಿದು ಬರುತ್ತದೆ. ಒಮ್ಮೆ ಕೀರ್ತಿ ಪಡೆಯಬೇಕೆಂಬ ಆಸೆ ಮನಸ್ಸಿನಲ್ಲಿ ಹೊಕ್ಕರೆ ಸಾಕು, ಮನಸ್ಸು ವಿಕೃತವಾಗಿ ವ್ಯಕ್ತಿ ಅಡ್ಡದಾರಿ ಹಿಡಿಯಲು ಹಿಂದೆ ಮುಂದೆ ನೋಡುವುದಿಲ್ಲ. ಕೀರ್ತಿ ತಾನಾಗಿಯೇ ವ್ಯಕ್ತಿಯ ಬೆನ್ನಟ್ಟಿ ಹೋಗಬೇಕೆ ಹೊರತು, ವ್ಯಕ್ತಿ ಕೀರ್ತಿಯ ಬೆನ್ನಟ್ಟಿ ಹೋಗಬಾರದು.

(ಆಕಾಶವಾಣಿ ಕೃಪೆ)

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ